..ಚುಕ್ಕಿ ಗೆರೆಯ ಉದ್ದಕ್ಕೂ ಕತ್ತರಿಸಿ..

ಪ್ರವೇಶಧನವಿಲ್ಲ



# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

**ಗೆಲ್ಲಿರಿ ಈ ಬಹುಮಾನಗಳನ್ನು**
**ಕ್ಯಾಮಲ್**

1ನೆಯ ಬಹುಮಾನ ರೂ. 15/-
3 ಎರಡನೆಯ ಬಹುಮಾನಗಳು ರೂ. 10/-
10 ಮೂರನೆಯ ಬಹುಮಾನಗಳು ರೂ. 5/-
10 ಪ್ರಮಾಣ ಪತ್ರಗಳು



ಈ ಸ್ಪರ್ಧೆಯಲ್ಲಿ ಕೇವಲ 12 ವರ್ಷಗಳ ವರೆಗಿನ ವಯಸ್ಸಿನ ಮಕ್ಕಳು ಭಾಗವಹಿಸಬಹುದು. ಮೇಲೆ ಕಾಣಿಸಿದ ಚಿತ್ರಕ್ಕೆ ಸಂಪೂರ್ಣವಾಗಿ ಕ್ಯಾಮೆಲ್ ಬಣ್ಣಗಳಿಂದ ಬಣ್ಣ ಕೊಡಿರಿ ಮತ್ತು ಅದನ್ನು ಈ ವಿಳಾಸಕ್ಕೆ ಕಳಿಸಿರಿ:

ಪಿ. ಬಿ. ನಂ. 9928, ಕೊಲಾಬಾ, ಬೊಂಬಾಯಿ 400 005.

ನಿರ್ಣಾಯಕರ ನಿರ್ಣಯವೇ ಅಂತಿಮ ನಿರ್ಣಯವಾಗುವುದು ಮತ್ತು ಎಲ್ಲರೂ ಅದಕ್ಕೆ ಬದ್ಧರಾಗುವರು. ಪತ್ರವ್ಯವಹಾರವನ್ನು ಮಾಡಲಾಗುವುದಿಲ್ಲ. ಕೂಪನನ್ನು ಇಂಗ್ಲಿಷ್‌ನಲ್ಲಿ ಮಾತ್ರ ತುಂಬಿರಿ.

Name: .................................................................... Age: ..............................

Address: ....................................................................................................

..................................................................................................................

Vision/CPL 6314 3 Kan.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *30—11—1983*

**CONTEST NO. 33**

**Results of Chandamama—Camlin Colouring Contest No.31 (Kannada)**

*1st Prize:* Ramesh Hurkadli, Bijapur. *2nd Prize:* Dhananjay N. Jadhav, Bangalore-560 003. Kumaraswami S. Mukarti Halmath, Nidagundi. M. Ganesh, Mangalore. *3rd Prize:* H. Bhoskara Caharya, Puttur. Rajendra Hangigol, Hubli. Santosh G.H. Bangalore-560 010. Bharati F. Shivomani, Anigol. V.G. Sripad Rao, Sagar. Jayalaxmi S. Shetty, Bombay-400 029. Yashodara D. Bangera, Bombay-86. Chetana Patil, Hubli. Vani Sree, Bhadravati. J. Jayashree Rao, Udupi.

ವಾಹವಾ, ವಾಹವಾ, ಈ ದಿನ ರಜಾ,
ಆಡಲು, ಓಡಲು ಭಾರೀ ಮಜಾ!
ಚೆಂಡಾಡೋಣ, ಮಳಲಲಿ ಕುಣಿಯೋಣ.
ಜೆಮ್ಸ್ ಹಂಚೋಣ, ಬಾ, ತಿನ್ನೋಣ.








**ಜೆಮ್ಸ್‌ನಿಂದ ಪ್ರತಿ ನಿಮಿಷವೂ ರಸ ನಿಮಿಷ!**

ಕ್ಯಾಡ್‌ಬರಿಸ್
ಚಾಕ್‌ಲೇಟ್ಸ್

ಕ್ಯಾಡ್‌ಬರಿಸ್ ಜೆಮ್ಸ್ ಇರುವುದೇ ಹೀಗೆ, ಸುಂದರ ಬಂಧುರ ಸ್ವಪ್ನದ ಹಾಗೆ.

OBM-9680-KN

# ಚಂದಮಾಮ

ಸಂಸ್ಥಾಪಕರು : ‘ ಚಕ್ರಪಾಣಿ ’

ಸಂಚಾಲಕರು : ನಾಗಿರೆಡ್ಡಿ

ಬಹಳ ಕಾಲದ ಮೇಲೆ ಈಸಾರಿ “ಚಂದಮಾಮ”ವನ್ನು ದೀಪಾವಳಿ ಸಂದರ್ಭದಲ್ಲಿ, ಹೆಚ್ಚಿಗೆ ಪುಟಗಳಿಂದ, ವರ್ಣರಂಜಿತ ಚಿತ್ರಗಳೊಂದಿಗೆ ವಿಶೇಷ ಸಂಚಿಕೆಯಾಗಿ ಪ್ರಕಟಿಸಿದ್ದೇವೆ. ಇದರಿಂದ ನಮಗೆಷ್ಟು ಸಂತೋಷವೋ ನಮ್ಮ ನೆಚ್ಚಿನ ವಾಚಕರಿಗೆ ಕೂಡಾ ಅಷ್ಟೇ ಸಂತೋಷವಾಗುವುದೆಂದು ನಮ್ಮ ನಂಬುಗೆ. “ ಚಂದಮಾಮ ” ಪೂರ್ತಿ ವರ್ಣಮಯವಾಗಿ ಹೊರಡಲು ಪ್ರಾರಂಭವಾದ ಮೇಲೆ ಇದೀಗ ಮೊದಲನೇ ವಿಶೇಷಸಂಚಿಕೆಯಾಗಿದೆ. ಈ ಬಗೆಯ ಅಭಿವೃದ್ಧಿ ನಿಮಗೆಲ್ಲರಿಗೂ, ಆ ಮೂಲಕ ದೇಶಕ್ಕೂ ಒದಗಿ ಬರಲೆಂಬುದೇ ದೀಪಾವಳಿಯ ನಮ್ಮ ಶುಭಾಶಯಗಳು.

## ಅಮರವಾಣಿ

**ನೀಚೋ ನಾಲ್ಪತಯಾ ದೃಷ್ಟೋ ಮೃಥಿಕೋನ ವಿಚಾರಯೇತ್**
**ದರ್ಪಣೇ ಪರ್ವತೋಽಪ್ಯಲ್ಪೇ ದೃಶ್ಯತೇ ಲಘುವತ್ಖಲು**

ನೀಚನು ತನ್ನನ್ನು ಹೀಯಾಳಿಸಿದರೂ ಉತ್ತಮನು ನೊಂದುಕೊಳ್ಳಲಾರನು. ಮಹಾಪರ್ವತವಾದರೂ ಕನ್ನಡಿಯೊಳಗೆ ಸಣ್ಣದಾಗಿಯೇ ಕಾಣುತ್ತದೆ.

ಸಂಪುಟ : ೭೧ ನವೆಂಬರ್ '೮೩ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೫೦ :: ವಾರ್ಷಿಕ ಚಂದಾ ರೂ. ೨೪-೦೦



## ಚಂದಮಾಮನ ಹರಟೆ




### ಸೂರ್ಯ ಕುಟುಂಬದಲ್ಲಿ ಅತಿಥಿ ಗ್ರಹ?

ಸೂರ್ಯಕುಟುಂಬದೊಳಗೆ ಹೊಸದೊಂದು ಗ್ರಹವು ಪ್ರವೇಶಿಸಿರಬೇಕೆಂದು ಖಗೋಳ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ನೆಪ್ಟ್ಯೂನ್, ಯುರೇನಸ್ ಗ್ರಹಗಳು ತಮ್ಮ ಕ್ರಮಮಾರ್ಗದಿಂದ ಸ್ವಲ್ಪ ಮೇಲೆ ಹೋಗುತ್ತಿವೆ ಯೆಂದೂ, ನೂತನ ಗ್ರಹದ ಪ್ರವೇಶವೇ ಅದಕ್ಕೆ ಕಾರಣವಿರಬೇಕೆಂದೂ 'ಸೈನ್ಸ್ ಡೈಜೆಸ್ಟ್' ಎಂಬ ಅಮೆರಿಕೆಯ ಪತ್ರಿಕೆ ತಿಳಿಸುತ್ತದೆ.

### ಬೌಲಿಂಗ್‌ನಲ್ಲಿ ಹೊಚ್ಚ ಹೊಸ ರಿಕಾರ್ಡು

ಅಮೆರಿಕಕ್ಕೆ ಸೇರಿದ ಜೇಮ್ಸ್ ಹಾರ್ಟ್‌ಮನ್ ಎಂಬ ಸೈನಿಕ ಉದ್ಯೋಗಿ, ಗಂಟೆಗೆ ಐದು ನಿಮಿಷ ವಿಶ್ರಾಂತಿ ತೆಗೆದುಕೊಳ್ಳುತ್ತ–ನೂರೈವತ್ತಾರು ಗಂಟೆ, ಇಪ್ಪತ್ತು ನಿಮಿಷಗಳು ಬೌಲಿಂಗ್ (ಭಾರವಾದ ಚೆಂಡು ಬೀಸಿ) ಮಾಡಿ ಪ್ರಪಂಚ ರಿಕಾರ್ಡು ಸೃಷ್ಟಿಸಿದನೆಂದು "ದಿ ನ್ಯೂ ಟೈಮ್ಸ್" ಸೋವಿಯೆಟ್ ರಷ್ಯಾ ಪತ್ರಿಕೆ ತಿಳಿಸುತ್ತದೆ.






### ಕೊಂಬೆಗಳ ಮೇಲೆ ಕುಟುಂಬ!

ಇತ್ತೀಚೆಗೆ ಅರ್ಜೆಂಟೈನಾದಲ್ಲಿ ಬಂದ ನೆರೆಯ ಕಾಲದಲ್ಲಿ, ಗಂಡಹೆಂಡಿರಿಬ್ಬರು ಮರದ ಮೇಲೇರಿ, ಎರಡು ತಿಂಗಳವರೆಗೆ ಅಲ್ಲೇ ಕುಟುಂಬ ನಡೆಸಿದರು. ರೆಂಬೆಗಳಿಂದ, ಎಲೆಗಳಿಂದ ಮರದ ಕೊಂಬೆಯಲ್ಲೇ ಗೂಡಿನಂತಹ ಗುಡಿಸಲು ನಿರ್ಮಿಸಿಕೊಂಡ ಅವರಿಗೆ, ಕೊಂಬೆಗೆ ಕಟ್ಟಲ್ಪಟ್ಟ ಒಂದು ಚಿಕ್ಕ ದೋಣಿ ಅಡಿಗೆ ಕೋಣೆಯಾಗಿ ಉಪಯೋಗವಾಯಿತು. ಕೊಂಬೆಗಳ ಮೇಲಿದ್ದೇ ಕೆಳಗೆ ನೀರಿನಲ್ಲಿರುವ ಮೀನುಗಳನ್ನು ಹಿಡಿದು ಅವರು ದಿನ ಕಳೆದರು.

## ನಿಮಗೆ ಗೊತ್ತೇ?

೧. ಭಾರತ ದೇಶಕ್ಕೆ ಮೊತ್ತ ಮೊದಲು ಬಂದ ವಿದೇಶೀಯ ಜೋಡಿಗಳು ಯಾರು?

೨. ನಮ್ಮ ದೇಶಕ್ಕೆ ಬಂದ ಮೊದಲನೇ ಇಟಲೀ ಪ್ರಯಾಣಿಕನು ಯಾರು? ಅವನು ಸಂದರ್ಶಿಸಿದ ಪ್ರಾಚೀನ ನಗರವು ನಿಮಗೆ ಗೊತ್ತಿದೆಯೆ?

೩. ನಮ್ಮ ದೇಶದ ಪರ್ಯಟನೆಗೆ ಬಂದ ಮೊದಲನೇ ರಷ್ಯಾ ಪ್ರಯಾಣಿಕನು ಯಾರು?

೪. ಭಾರತ ದೇಶಕ್ಕೆ ಬಂದ ಮೊದಲನೇ ಪೋರ್ಚುಗೀಸು ಪ್ರಯಾಣಿಕನು ಯಾರು?

೫. ಭಾರತ ದೇಶವೆಂದು ಪ್ರಸಿದ್ಧಿ ಪಡೆದ ಪ್ರಾಂತವು ನಮ್ಮ ದೇಶದಲ್ಲಿ ಎಲ್ಲಿದೆ?

(ಉತ್ತರ ೮೦ ನೇ ಪುಟದಲ್ಲಿ)



# ಅಭಿಮಾನಿ

ಹಿಂದೆ ವಿಜಯಪುರಿ ರಾಜ್ಯದಲ್ಲಿ ಶ್ರೀಕಾಂತನೆಂಬ ಮಹಾಕವಿಯೊಬ್ಬನಿದ್ದನು. ಅವನು ಎಷ್ಟು ದೊಡ್ಡ ಕವಿಯೆಂದರೆ ಅವನ ಬಾಯಿಯಿಂದ ಹೊರಡುವ ಪ್ರತಿಮಾತೂ ಒಂದು ಪದ್ಯವಾಗಿ ಹೋಗುತ್ತದೆಂದು ಜನರು ಹೇಳಿಕೊಳ್ಳುವರು. ಅವನೊಡನೆ ಮಾತಾಡಬೇಕೆಂದು ಅನೇಕರಿಗೆ ಕುತೂಹಲವಿತ್ತು.

ಆದರೆ ಅವನನ್ನು ಕಲೆತುಕೊಳ್ಳುವುದು ಸುಲಭವೇ ನಲ್ಲ. ಕಾರಣ, ಅವನಿಗೆ ಅಹಂಕಾರ ಬಲು ಹೆಚ್ಚು. ತನ್ನನ್ನು ನೋಡಲು ಯಾರಾದರೂ ಬಂದರೆ ಅವರಿಗೆ ಬೇಗನೆ ದರ್ಶನ ಕೊಡಲಾರನು.

ಶ್ರೀಕಾಂತನಿಗೆ ರಾಜನ ಆದರಣೆಯೂ ಬಹಳ ವಾಗಿತ್ತು. ರಾಜನ ಹತ್ತಿರ ಕೂಡಾ ಶ್ರೀಕಾಂತನು ಅಹಂಕಾರದಿಂದಲೇ ಪ್ರವರ್ತಿಸುತ್ತಿದ್ದನು. ಮಹಾ ಕವಿಗಳಿಗೆ ಅಹಂಕಾರವು ಒಂದು ಭೂಷಣವೆಂದು ಕೊಂಡು ರಾಜನು ಸುಮ್ಮನೆ ಸಹಿಸಿಕೊಂಡಿದ್ದನು.

ರಾಜಧಾನಿಗೆ ಬಹಳ ದೂರದಲ್ಲಿರುವ ಒಂದು ಅಗ್ರಹಾರದಲ್ಲಿ ಕನಕಭೂಷಣನೆಂಬ ಯುವಕನೊಬ್ಬ ನಿದ್ದನು. ಅವನದು ಪಂಡಿತ ಕುಟುಂಬವಾಗಿತ್ತು. ಶ್ರೀಕಾಂತನ ಕವಿತ್ವವೆಂದರೆ ಅವನಿಗೆ ಬಹಳ ಇಷ್ಟ. ಆ ಮಹಾಕವಿ ಬರೆದ ಕಾವ್ಯಗಳೆಲ್ಲವನ್ನೂ ಅವನು ಓದಿ ಕೆಲವನ್ನು ಕಂಠಪಾಠ ಮಾಡಿದ್ದನು. ಆ ಮಹಾಕವಿ, ಬಹಳ ಗರ್ವಿಷ್ಠನೂ, ಅಹಂಕಾರಿಯೂ ಎಂದು ಎಲ್ಲರೂ ಹೇಳುವುದನ್ನು ಕೇಳುವಾಗ ಅವನಿಗೆ ಸಂಕಟವಾಗುತ್ತಿತ್ತು.

ಜನರು ಹೇಳುವ ಆ ಮಾತಿನಲ್ಲಿ ಎಷ್ಟು ನಿಜ ವಿದೆಯೋ ತಿಳಿದುಕೊಳ್ಳಬೇಕೆಂಬ ಉತ್ಕಟೇಚ್ಛೆ ಯಿಂದ, ಒಂದು ದಿನ ಅವನು ವಿಜಯಪುರಿಗೆ ಹೊರಟನು. ರಾಜಧಾನಿಯನ್ನು ಸೇರಿ ಶ್ರೀಕಾಂತ ನನ್ನು ನೋಡಲು ಹೋದನು.

ಒಂದು ದಿನವಿಡೀ ಶ್ರೀಕಾಂತನು ಮನೆಯೊಳಗೇ ಇದ್ದರೂ, ಇಲ್ಲವೆಂದೂ, ಎಲ್ಲಿಗೋ ಹೋಗಿದ್ದಾ ರೆಂದೂ ಹೇಳಿಸಿಬಿಟ್ಟನು. ಎರಡನೆಯ ದಿನ, ಕಾವ್ಯ ಪಠನದಲ್ಲಿದ್ದೇನೆಂದನು. ಮೂರನೇ ದಿನ ಕಾವ್ಯ ಬರೆಯುವ ಕೆಲಸದಲ್ಲಿರುವನೆಂದಾಯಿತು. ನಾಲ್ಕನೆಯ ದಿನ ಅವನು ಕನಕಭೂಷಣನಿಗೆ ದರ್ಶನವಿತ್ತು, "ನನಗೆ ನಿನ್ನಂಥವರೊಡನೆ ಹೆಚ್ಚು ಮಾತಾಡಿ ಹೊತ್ತು ಕಳೆಯಲು ಸಾಧ್ಯವಿಲ್ಲ. ನಿನಗೇನಾಗಬೇಕೆಂಬುದನ್ನು ಬೇಗನೇ ಹೇಳು " ಎಂದನು.









"ನಿಮ್ಮ ಕವಿತ್ವವೆಂದರೆ ನನಗೆ ಪ್ರಾಣ. ನಿಮ್ಮನ್ನು ನೋಡಬೇಕೆಂದು ವರ್ಷವಿಡೀ ಹಣ ಸೇರಿಸಿ ಬಂದಿದ್ದೇನೆ." ಎಂದನು ಕನಕಭೂಷಣ.

"ಒಳ್ಳೇದೇ ಅನ್ನು. ನನ್ನನ್ನು ನೋಡಿ ಏನು ಮಾಡುತ್ತೀ ?" ಎಂದನು ಶ್ರೀಕಾಂತ.

"ಸ್ವಲ್ಪ ಹೊತ್ತು ನಿಮ್ಮ ಹತ್ತಿರ ಮಾತಾಡಬೇಕೆಂದು ಆಸೆ" ಎಂದನು ಕನಕಭೂಷಣ.

"ನಾನು ಮಾತಾಡಿದರೆ ನೀನು ಸುಮ್ಮನೆ ಕೇಳುವುದರ ಹೊರತು, ಉತ್ತರ ಕೊಡಲು ನಿನಗಾಗದು. ಮಹಾಕವಿಯ ಮಾತುಗಳ ತತ್ವವನ್ನು ಅರ್ಥಮಾಡಿಕೊಳ್ಳಲು ನಿನ್ನಿಂದಾದೀತೆ ?" ಎಂದನು ಶ್ರೀಕಾಂತ.

"ನಿಮ್ಮ ಕಾವ್ಯಗಳನ್ನು ಬಹಳ ಮಟ್ಟಿಗೆ ಓದಿದ್ದೇನೆ. ಸ್ವಲ್ಪ ಮಟ್ಟಿಗೆ ಅರ್ಥ ಮಾಡಿಕೊಂಡು, ಆ ಕುತೂಹಲದಿಂದಲೇ ಬಂದಿದ್ದೇನೆ. ದಯವಿಟ್ಟು ಈವರೆಗೂ ಯಾರಿಗೂ ಹೇಳದಿದ್ದ ಒಂದು ಹೊಸ ಪದ್ಯವನ್ನು ನನಗೆ ಹೇಳಿದರೆ ಸಾಕು. ಅದೇ ಮಹಾಪ್ರಸಾದವೆಂದು ಭಾವಿಸಿಕೊಂಡು ಹೊರಟು ಹೋಗಿಬಿಡುತ್ತೇನೆ" ಎಂದನು ಕನಕಭೂಷಣ.

"ಮಹಾರಾಜನು ಹೇಳಿದ ಮಾತ್ರಕ್ಕೆ ಕೂಡಾ ನಾನು ಪದ್ಯ ಹೇಳಲಾರೆನು. ಒಬ್ಬರು ಕೇಳಿದಾಗಲೆಲ್ಲ ಬಾಯಿಗೆ ಬಂದ ಪದ್ಯ ಹೇಳುವ ಅಭ್ಯಾಸ ನನಗಿಲ್ಲ." ಎಂದನು ಶ್ರೀಕಾಂತ.

"ಹೋಗಲಿ. ನಿಮ್ಮ ಮನೆಯ ಜಗಲಿಯ ಮೇಲೆ ಕುಳಿತುಕೊಂಡಿರುತ್ತೇನೆ. ನಿಮಗೆ ಹೇಳಬೇಕೆಂದು ತೋರಿದಾಗಲೇ ಹೇಳಿರಿ." ಎಂದು ಕನಕಭೂಷಣನು ವಿನಯದಿಂದ ಹೇಳಿದನು.

"ನಿನ್ನಂಥವನಿಗೆ ನನ್ನ ಪದ್ಯವನ್ನು ಹಾಗೆ ಒಬ್ಬಂಟಿಗನಾಗಿ ಕೇಳುವ ಅರ್ಹತೆ ಇಲ್ಲ. ಬೇಕಾದರೆ ರಾಜಾಸ್ಥಾನಕ್ಕೆ ಬಂದು, ಹತ್ತು ಮಂದಿಯಲ್ಲಿ ಒಬ್ಬನಾಗಿ ಕುಳಿತು ಕೇಳಿ ಹೋಗು. ಗೊತ್ತಾಯಿತಷ್ಟೆ? ಇನ್ನು ಚಿರಿಚಿರಿ ಮಾಡದೆ ಹೊರಟು ಹೋಗು" ಎಂದು ಹೇಳಿ ಮನೆಯೊಳಗೆ ಹೋಗಿಬಿಟ್ಟನು ಶ್ರೀಕಾಂತ.

ಬೇರೆ ಉಪಾಯವಿಲ್ಲದೆ ಕನಕಭೂಷಣನು ನಿರಾಶೆಯಿಂದ ಹೊರಟು ಹೋದನು.

ಮರುದಿನ ಶ್ರೀಕಾಂತನಿಗೆ, ಅವನ ಅಣ್ಣ ರಮಾಕಾಂತನಿಗೆ ಗಸ್ತುಕಾಯಿಲೆ ಎಂದು ಸಮಾಚಾರ ಬಂದಿತು. ರಾಜಧಾನಿಗೆ ದೂರದಲ್ಲಿರುವ ಒಂದು ಗ್ರಾಮದಲ್ಲಿ ಅ ಅಣ್ಣನಿದ್ದನು. ಇದನ್ನು ತಿಳಿದು ರಾಜನು ಶ್ರೀಕಾಂತನಿಗಾಗಿ ಒಂದು ಕುದುರೇ ಗಾಡಿಯನ್ನು ಏರ್ಪಾಡು ಮಾಡಿಸಿಕೊಟ್ಟನು.

ಆ ಗಾಡಿಯಲ್ಲಿ ಶ್ರೀಕಾಂತನು ಪ್ರಯಾಣ ಮಾಡುತ್ತಿರಲು, ಸುಮಾರು ಎರಡು ಗಂಟೆ ದಾರಿ ಸಾಗಿದ ಮೇಲೆ ಕುದುರೆಗೆ ಏನೋ ಆಗಿ ಬಿದ್ದುಬಿಟ್ಟಿತು. ಗಾಡಿಯವನು ಪರೀಕ್ಷೆ ಮಾಡಿ ನೋಡಿ ಶ್ರೀಕಾಂತನೊಂದಿಗೆ, "ಅಯ್ಯಾ, ಎಲ್ಲವೂ ನಿಮ್ಮ ದುರದೃಷ್ಟವೆನ್ನಬೇಕಾಯಿತು. ಚೆನ್ನಾಗಿದ್ದ ಕುದುರೆಗೆ ಏನೋ



ರೋಗ ಬಂದಿದೆ. ನೀವು ಆ ದಿಕ್ಕಿನಲ್ಲಿ ಸ್ವಲ್ಪದೂರ ಹೋದರೆ ಸಾಕು, ಅಲ್ಲೊಂದು ನಗರವಿದೆ. ನಗರದ ಮೇರೆಯಲ್ಲೇ ಒಂದು ಛತ್ರ ನಿಮಗೆ ಕಾಣುತ್ತದೆ. ನೀವು ಅಲ್ಲಿಗೆ ಹೋಗಿ ತಂಗಿಕೊಂಡಿರಬಹುದು. ನಾನು ಕುದುರೆಗೆ ಚಿಕಿತ್ಸೆ ಮಾಡಿಸಿ, ಅದಕ್ಕೆ ಹುಷಾರಾದ ಕೂಡಲೇ ಅಲ್ಲಿಗೇ ಗಾಡಿ ತೆಗೆದುಕೊಂಡು ಬರುತ್ತೇನೆ" ಎಂದನು.

ಬೇರೆ ದಾರಿ ಕಾಣದೆ ಶ್ರೀಕಾಂತನು ಕಾಲುನಡಿಗೆಯಿಂದ ಹೊರಟನು. ಗಾಡಿಯವನು ಹೇಳಿದ ಹಾಗೆ ನಗರವು ಸಮೀಪದಲ್ಲಿರಲಿಲ್ಲ. ಬಹಳ ದೂರವೇ ಇದ್ದಿತು. ಅವನು ನಗರದ ಮೇರೆಯಲ್ಲಿರುವ ಛತ್ರದ ಹತ್ತಿರ ಹೋದಾಗ, ಅವನ ಬಟ್ಟೆ ಬರೆಗಳೆಲ್ಲ ಧೂಳು ಬಡೆದುಹೋದುವು. ಅವನು ಆಯಾಸಪಡುತ್ತ ಬಾಡಿ, ಬೇಸರಗೊಂಡು ಛತ್ರವನ್ನು ಪ್ರವೇಶಿಸಿದನು.

ಛತ್ರದ ಯಜಮಾನನು ಶ್ರೀಕಾಂತನನ್ನು ನೋಡಿ. "ಕೋಣೆ ಯಾವುದೂ ಖಾಲಿ ಇಲ್ಲ. ಬಿಡು ಜಗಲಿಯಲ್ಲಿ ಬೇಕಾದರೆ ಇರಬಹುದು. ಅಭ್ಯಂತರವೇನಿಲ್ಲ"ಎಂದನು.

ನಾನು ಯಾರು ಗೊತ್ತೇ? ಮಹಾಕವಿ ಶ್ರೀಕಾಂತ. ಜಗಲಿಯಲ್ಲಿರಲು ಹೇಳುವೆಯಾ? ಕೂಡಲೇ ಕೋಣೆಯ ಏರ್ಪಾಡು ಮಾಡಿಕೊಡು" ಎಂದನು ಶ್ರೀಕಾಂತ ಕೋಪದಿಂದ,

ಆ ಮಾತು ಕೇಳಿ ಛತ್ರದ ಯಜಮಾನನು ಒಂದೇ ಸಮನೆ ನಗಲು ತೊಡಗಿದನು.

"ನನ್ನ ಮುಂದೆ ಹಾಗೆ ನಗಲಿಕ್ಕೇನಾಯಿತು? ತಲೆ ಕೆಟ್ಟದೆಯೆ?" ಎಂದನು ಶ್ರೀಕಾಂತ ಮತ್ತಷ್ಟು ಕೋಪದಿಂದ.

"ಅದು ಬಹುಶಃ ನಿನಗೇನೋ ಎಂದು ನಗುತ್ತೇನೆ. ನಿನ್ನ ದುರದೃಷ್ಟದಿಂದ ಆ ಮಹಾಕವಿ ಶ್ರೀಕಾಂತರೇ ಈದಿನ ಈ ಛತ್ರದಲ್ಲಿ ವಾಸವಾಗಿದ್ದಾರೆ. ಇಲ್ಲದಿದ್ದರೆ ನಿನ್ನ ಮಾತನ್ನು ನಂಬುತ್ತಿದ್ದೆ" ಎಂದನು ಛತ್ರದ ಯಜಮಾನ.

ಶ್ರೀಕಾಂತನು ಆಶ್ಚರ್ಯದಿಂದ, "ಎಲ್ಲಿ? ಆ ಶ್ರೀಕಾಂತನನ್ನು ನನಗೆ ತೋರಿಸು!" ಎಂದನು ಆತುರದಲ್ಲಿ ಅತ್ತಿತ್ತ ನೋಡುತ್ತ.

"ಪಕ್ಕದ ಕೋಣೆಯಲ್ಲಿದ್ದಾರೆ, ಮರ್ಯಾದೆಯಾಗಿ ನೋಡಿ ಬಂದು ಬಿಡು. ಆತನ ಕಾವ್ಯಗೋಷ್ಠಿಯನ್ನು ನೋಡಿ ಹೋಗಿ ಕೆಡಿಸಿದರೆ ನನ್ನ ಕೆಲಸಕ್ಕೆ ಎಸರು ಬಂದೀತು!" ಎಂದನು ಛತ್ರದ ಯಜಮಾನ.

ಶ್ರೀಕಾಂತನು ಬಹಳ ಕುತೂಹಲದಿಂದ ಛತ್ರದ ಯಜಮಾನನು ಹೇಳಿದ ಕೋಣೆಯ ಬಳಿಗೆ ಹೋಗಿ, ಒಳಗಿನ ದೃಶ್ಯವನ್ನು ನೋಡಿ ಬೆರಗಾದನು.

ಅಲ್ಲಿ ತನ್ನ ಹಾಗೆಯೇ ಬಟ್ಟೆಬರೆ ಧರಿಸಿಕೊಂಡು, ತನ್ನನ್ನೇ ಅನುಕರಿಸಿಕೊಂಡು ಮಾತಾಡಿಕೊಂಡಿರುವ ಒಬ್ಬ ಮನುಷ್ಯನು ಕಾಣಿಸಿದನು, ಅವನ ಸುತ್ತಲೂ ಅನೇಕ ಮಂದಿ ಅಭಿಮಾನಿಗಳಿದ್ದರು. ಅವರು ಕೇಳುವ ಶ್ರೀಕಾಂತನ ಕಾವ್ಯಗಳಿಗೆ ಪ್ರಶ್ನೆಗಳಿಗೆ ಅವನು ಸಹನೆಯಿಂದ ಮುಗುಳುನಗುತ್ತ ಉತ್ತರ ಕೊಡುತ್ತಿದ್ದನು.





"ಕೇದಾರಮಾಲೆ ಎಂಬ ಕಾವ್ಯವನ್ನು ಏಕೆ ಬರೆಯಬೇಕಾಗಿ ಬಂತು ನಿಮಗೆ ?" ಎಂದು ಒಬ್ಬನ ಪ್ರಶ್ನೆ. ಅವನ ರಚನೆಯ ಒಂದು ಪದ್ಯವನ್ನು ಹೇಳಿ, ಆ ಪದ್ಯಕ್ಕೆ ಅರ್ಥವೇನೆಂದು ಇನ್ನೊಬ್ಬನ ಪ್ರಶ್ನೆ. ಹೀಗೆ ಬಗೆಬಗೆಯ ಪ್ರಶ್ನೆಗಳನ್ನು ಕೇಳುತ್ತಿದ್ದರು. ಕೆಲವರು ಪದ್ಯಗಳನ್ನು ಅವನ ಬಾಯಿಯಿಂದಲೇ ಕೇಳಬೇಕೆಂದರು. ಅವನು ಶ್ರಾವ್ಯವಾಗಿ ಶ್ರೀಕಾಂತ ಕವಿಯ ಪದ್ಯವನ್ನು ಆಲಾಪಿಸುತ್ತ, ಅರ್ಥವನ್ನೂ ವಿವರಿಸಿ ಹೇಳುತ್ತಿದ್ದನು.

ಚೆನ್ನಾಗಿ ಪರೀಕ್ಷಿಸಿ ನೋಡಿದಾಗ ಆ ಮನುಷ್ಯನು ಯಾರೆಂದು ಶ್ರೀಕಾಂತನಿಗೆ ತಿಳಿದುಬಿಟ್ಟಿತು. ಅವನು ತನ್ನನ್ನು ನೋಡಲು ಬಂದ ಕನಕಭೂಷಣನೇ !

ಈಗ ಏನು ಮಾಡಿದರೆ ಚೆನ್ನಾಗಿರುತ್ತದೆಂದು ಶ್ರೀಕಾಂತನು ಆಲೋಚಿಸುತ್ತಿರುವಾಗ ಗೋಷ್ಠಿ ಮುಗಿದು ಎಲ್ಲರೂ ಹೊರಟುಹೋದರು. ಶ್ರೀಕಾಂತನು ಕನಕಭೂಷಣನ ಬಳಿಗೆ ಹೋಗಿ, ಬಹಳ ಕೋಪದಿಂದ, "ಇದೇನು ಕೆಲಸ ನಿನ್ನದು ? ನನ್ನ ಹೆಸರಿಟ್ಟುಕೊಂಡು ಏಕೆ ಹೀಗೆ ಎಲ್ಲರನ್ನೂ ಮೋಸಪಡಿಸುತ್ತೀ? ಇಂತಹುದಕ್ಕೆ ರಾಜನು ಎಂತಹ ದಂಡನೆ ಕೊಡುವನೆಂದು ಗೊತ್ತಿದೆಯೆ?" ಎಂದನು.

ಕನಕಭೂಷಣನು ಶ್ರೀಕಾಂತನಿಗೆ ಬಹಳ ವಿನಯದಿಂದ ನಮಸ್ಕಾರ ಮಾಡಿ, "ಅಯ್ಯಾ, ತಮ್ಮನ್ನು ಸಂಧಿಸಿ ಮಾತಾಡಿದನಂತರವೇ ನನಗೆ ಈ ಬುದ್ಧಿ ಹುಟ್ಟಿತು. ನಾನು ನಿಮ್ಮ ಕಟ್ಟುನಿಟ್ಟಿನ ಅಭಿಮಾನಿ. ನೀವೆಂದರೆ ನನಗೆ ಬಹಳ ಗೌರವ. ನಿಮ್ಮನ್ನು ಕುರಿತು ಯಾರಾದರೂ ಕೆಟ್ಟ ಮಾತು ಹೇಳಿದರೆ ನನಗೆ ಸಹಿಸಲಾಗುವುದಿಲ್ಲ. ಅಂತಹ ಮಾತುಗಳನ್ನು ಕೇಳಿ, ನಿಜವೋ ಸುಳ್ಳೋ ನೋಡಲಿಕ್ಕೇ ನಾನು ನಿಮ್ಮ ಬಳಿಗೆ ಬಂದೆನು. ಆಮೇಲೆ ಹೀಗೆ ನಿಮ್ಮ ಪರಿಚಯವಿಲ್ಲದವರ ನಡುವೆ ನಿಮ್ಮ ಹೆಸರಿನಿಂದ ಬಂದು, ನಿಮ್ಮಲ್ಲಿಲ್ಲದ ವಿನಯಗುಣವನ್ನು ನಟಿಸುತ್ತ, ನಿಮಗೆ ಒಳ್ಳೆಯ ಹೆಸರು ಬರುವ ಹಾಗೆ ಮಾಡಲು ಪ್ರಯತ್ನಿಸುತ್ತಿದ್ದೇನೆ. ನೀವು ಕೇಳಿದಿರೋ ಇಲ್ಲವೋ, ಈಗ ಇಲ್ಲಿಂದ ಹೋದವರೆಲ್ಲರೂ ನಿಮ್ಮ ಗುಣಗಳನ್ನು ಮೆಚ್ಚಿಕೊಳ್ಳುತ್ತಾ ಹೋಗಿದ್ದಾರೆ. ನಿಮ್ಮ ಅಭಿಮಾನಿಯಾದ ನನಗೆ ಬೇಕಾದದು ನಿಮಗೆ ಒಳ್ಳೆಯ ಹೆಸರು ಬರಬೇಕೆಂಬುದೇ. ನೀವು ಗರ್ವಿಷ್ಠರು, ಅಹಂಕಾರಿಗಳು ಅಲ್ಲವೆಂದು ಎಲ್ಲರೂ ತಿಳಿಯಲೆಂದೇ ಹೀಗೆ ಮಾಡಿದೆನು" ಎಂದನು.

ಇಂತಹ ಉತ್ತಮ ಅಭಿಮಾನಿಯನ್ನು ಹೀಯಾಳಿಸಿದುದನ್ನು ನೆನೆದು ಶ್ರೀಕಾಂತನು ನಾಚಿಕೊಂಡನು. ಅನಂತರ ಆತನ ಪ್ರವರ್ತನೆಯಲ್ಲಿ ದೊಡ್ಡ ಬದಲಾವಣೆ ಬಂದಿತು. ಅವನ ಕಾವ್ಯಗಳು ಎಷ್ಟು ಉತ್ತಮವೋ ಅವನೂ ಅಷ್ಟೇ ಉತ್ತಮನೆನಿಸಿದನು



# ಕನಸಿನ ಪ್ರಭಾವ

"ತಿರುಗಿಬಂದನಲ್ಲಾ ತ್ರಿವಿಕ್ರಮ!" ಎಂದು ಬೇತಾಳವು ಬೆಚ್ಚಿಬೀಳುವಂತೆ ಮರಹತ್ತಿದ ತ್ರಿವಿಕ್ರಮನು ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಆವಾಹಿತವಾಗಿದ್ದ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ, "ರಾಜಾ, ಇಂತಹ ನಟ್ಟಿರುಳಿನ ಸಮಯದಲ್ಲಿ ದಿನಾ ನೀನು ಹೀಗೆ ಕಷ್ಟಪಡಲು ಅಸಲು ಕಾರಣವೇನೋ ನಾನರಿಯೆ. ಜೀವಿತದಲ್ಲಿ ತುಂಬಾ ಅನುಭವವೂ, ವಿವೇಕವೂ ಉಳ್ಳವರು ಕೂಡಾ ಒಂದೊಂದು ಸಾರಿ ವಿಚಿತ್ರವಾಗಿ ವರ್ತಿಸುತ್ತಾರೆ. ಇನ್ನು ಏನೂ ತಿಳಿಯದ ಅವಿವೇಕಿಗಳ ಸಂಗತಿಯನ್ನು ಹೇಳಬೇಕಾಗಿಯೇ ಇಲ್ಲವಷ್ಟೆ? ರಾಜನಾದವನು ಯಾವಾಗಲೂ ರಾಜ್ಯ ವಿಸ್ತರಣೆಗಾಗಿ ಪ್ರಯತ್ನಿಸುತ್ತಿರಬೇಕು. ಹಾಗೆಯೇ ವ್ಯಾಪಾರಸ್ಥನು ಧನಾರ್ಜನೆಗಾಗಿ ಯಾವ ಕಾಲಕ್ಕೆ ಹೇಗೋ ಹಾಗೆ ಹೊಸ ಮಾರ್ಗಗಳನ್ನು ಕಂಡುಕೊಳ್ಳಬೇಕು. ಹಾಗಿಲ್ಲದಿದ್ದರೆ ಬಲವಂತರಾದ

## ಬೇತಾಳ ಕಥೆಗಳು?...







ಬೇರೊಬ್ಬರಿಂದ ರಾಜನೂ, ಬುದ್ಧಿವಂತನಾದ ಸ್ಪರ್ಧಾಳುವಿನಿಂದ ವ್ಯಾಪಾರಿಯೂ ಅಪಜಯದ ಪಾಲಿಗೆ ಬೀಳುತ್ತಾರೆ. ಇದಕ್ಕೆ ತಾರ್ಕಾಣೆಯಾಗುವ ಹಾಗೆ, ಸ್ನೇಹಿತನ ಸಲಹೆಯಂತೆ ನಡೆದು ಕೋಟಿಗಟ್ಲೆ ಸಂಪಾದಿಸಬೇಕಾಗಿದ್ದ ಶ್ರೀಗುಪ್ತನೆಂಬ ವ್ಯಾಪಾರಿ ತನ್ನ ಅವಿವೇಕದಿಂದ ಬಂದ ಅವಕಾಶವನ್ನು ಹೇಗೆ ಜಾರಬಿಟ್ಟನೆಂಬುದನ್ನು ಹೇಳುತ್ತೇನೆ. ನಡೆಯುವ ಶ್ರಮ ತಿಳಿಯದಂತೆ ಆ ಕಥೆಯನ್ನು ಕೇಳು" ಎಂದು ಕಥೆಯನ್ನು ಪ್ರಾರಂಭಿಸಿತು :

ಸಣ್ಣದೊಂದು ಪಟ್ಟಣದಲ್ಲಿ ಶ್ರೀಗುಪ್ತನು ನಗಗಳ ಅಂಗಡಿಯನ್ನಿಟ್ಟು ವ್ಯಾಪಾರ ಮಾಡಿಕೊಂಡಿದ್ದನು. ಅವನ ಸ್ನೇಹಿತನಾದ ಶ್ರೀಕಂಠನು ರಾಜಧಾನಿಯ ದೊಡ್ಡ ನಗರದಲ್ಲಿ ವಾಸಮಾಡಿಕೊಂಡಿದ್ದನು. ಅಲ್ಲಿ ಶ್ರೀಕಂಠನು ನಗರದೊಳಗಿನ ದೊಡ್ಡ ಧನಿಕರಲ್ಲಿ ಒಬ್ಬನಾಗಿದ್ದನು. ಅದಕ್ಕೆ ಕಾರಣವಿತ್ತು. ಅವನದು ದೊಡ್ಡ ವೊತ್ತಗಳಿಂದಾಗುವ ಸಮುದ್ರ ವ್ಯಾಪಾರವಾದುದರಿಂದ ಅವನು ದೊಡ್ಡ ಧನಿಕನಾದುದು ಸಹಜವೇ. ಆ ಶ್ರೀಕಂಠನೂ ಶ್ರೀಗುಪ್ತನೂ ಚಿಕ್ಕಂದಿನ ಸ್ನೇಹಿತರು. ಒಂದು ಸಾರಿ ಶ್ರೀಕಂಠನು ಕೆಲಸದ ಮೇಲೆ ಬಂದವನು ಶ್ರೀಗುಪ್ತನನ್ನು ನೋಡಲು ಅವನ ಮನೆಗೆ ಹೋದನು. ಶ್ರೀಗುಪ್ತನ ನಗಗಳ ವ್ಯಾಪಾರವು ಲಾಭದಾಯಕವಾಗಿಯೇ ನಡೆಯುವುದೆಂದು ಶ್ರೀಕಂಠನು ತಿಳಿದುಕೊಂಡನು. ಆದರೆ ತಾನು ಸಮುದ್ರ ವ್ಯಾಪಾರದಲ್ಲಿ ಗಳಿಸುವ ಲಾಭವನ್ನು ಅದರೊಂದಿಗೆ ಹೋಲಿಸಲು ಸಾಧ್ಯವಿರಲಿಲ್ಲ. ಇದು ಕೆರೆಯಾದರೆ ಅದು ನಿಜಕ್ಕೂ ಸಮುದ್ರವೇ ಸರಿ.

ಶ್ರೀಕಂಠನು ತನ್ನ ಸ್ನೇಹಿತನೊಂದಿಗೆ ಅನೇಕ ವಿಷಯಗಳನ್ನು ಕುರಿತು ಮಾತಾಡುತ್ತ, ನಗರದಲ್ಲಿ ತನಗಿರುವ ಆಸ್ತಿಪಾಸ್ತಿಗಳ ವಿವರಗಳನ್ನು ಹೇಳುತ್ತ, "ಅಲ್ಲ ಶ್ರೀಗುಪ್ತಾ, ನಿನ್ನ ಈ ಒಂದೇ ಕಡೆಯಲ್ಲಿ ಮಾಡುವ ವ್ಯಾಪಾರದಿಂದ ಲಾಭಬರುತ್ತದೆಂಬ ಸಂತೃಪ್ತಿಯೊಂದರ ಹೊರತು ವಿರಿಳಿತವೇನೂ ಇರುವುದಿಲ್ಲ. ದೇಶದೇಶಗಳೊಂದಿಗೆ ಸಮುದ್ರ ವ್ಯಾಪಾರ ಮಾಡುವುದರಿಂದ ಕೋಟಿಕೋಟಿಯಾಗಿ ಹಣಗಳನ್ನೆತ್ತಬಹುದು. ಅದರಲ್ಲಿ ನೀನು ಮೊದಲು ಸ್ವಲ್ಪ ಅನುಭವ ಪಡೆಯಲು, ನನ್ನ ವ್ಯಾಪಾರದಲ್ಲಿ ಒಂದು ಹತ್ತು ಸಾವಿರ ವರಹಗಳನ್ನು ಮೂಲಧನ ಹಾಕಿ ನೋಡು. ಪರಿಣಾಮ ಎಷ್ಟು ಒಳಿತಾಗುವುದೆಂದು ನಿನಗೇ ತಿಳಿಯುತ್ತದೆ. ನಿನಗೆ ಮೇಲಾಗದಿದ್ದರೆ ಮತ್ತೆ ಕೇಳು" ಎಂದು ಸಲಹೆ ಮಾಡಿದನು.

"ನೋಡುತ್ತೇನೆ. ಆಲೋಚನೆ ಮಾಡಿ ಒಂದು ನಿಶ್ಚಯಕ್ಕೆ ಬರಲು ಕೆಲವು ದಿನ ಅವಕಾಶಬೇಕು. ಕಣ್ಣುಮುಚ್ಚಿ ಒಪ್ಪಿಬಿಡುವ ಮಾತಲ್ಲ ಇದು" ಎಂದನು ಶ್ರೀಗುಪ್ತ.

ಶ್ರೀಕಂಠನು ಸರಿಯೆಂದು ಹೇಳಿ ನಗರಕ್ಕೆ ಹೊರಟು ಹೋದನು. ಶ್ರೀಗುಪ್ತನು ಕೆಲವು ದಿನಗಳ ಮೇಲೆ ಶ್ರೀಕಂಠನ ಆಲೋಚನೆಯಂತೆ ನಡೆಯಲು ನಿರ್ಣಯಿಸಿ,





ಹತ್ತು ಸಾವಿರ ವರಹಗಳನ್ನು ತೆಗೆದುಕೊಂಡು ರಾಜಧಾನೀ ನಗರದ ಕಡೆಗೆ ಹೊರಟನು.

ಶ್ರೀಗುಪ್ತನು ದಾರಿಸಾಗುತ್ತಾ ಮಧ್ಯಾಹ್ನದ ಹೊತ್ತಿಗೆ ಆಯಾಸವಾದುದರಿಂದ ದಾರಿಯ ಬದಿಯಲ್ಲಿದ್ದ ಒಂದು ಮಾವಿನ ತೋಟಿಗೆ ಹೋಗಿ, ತೀನಿಪಾನ ಮುಗಿಸಿ, ಸ್ವಲ್ಪ ವಿಶ್ರಾಂತಿಯಾಗಿ ಒರಗಿದನು. ಮರದ ನೆರಳು ಚೆನ್ನಾಗಿದ್ದರೂ, ನೆಲದಲ್ಲಿ ಎಂಥದೋ ಚುಚ್ಚಿಕೊಳ್ಳುತ್ತಿದ್ದುದರಿಂದ ಅವನಿಗೆ ನಿದ್ದೆ ಬರಲಿಲ್ಲ, ಆಚೆಗೂ ಈಚೆಗೂ ಹೊರಳಿ ಮೈ ಸರಿಪಡಿಸಿಕೊಳ್ಳುತ್ತಿದ್ದಂತೆ, ಅವನಿಗೆ ತಿಳಿಯದಂತೆಯೇ ನಿದ್ರೆ ಹತ್ತಿಕೊಂಡಿತು.

ಆ ನಿದ್ದೆಯಲ್ಲಿ ಅವನಿಗೆ ಕನಸಾಯಿತು. ಕನಸಿನಲ್ಲಿ ಅವನು ಸಮುದ್ರದ ತೀರದಲ್ಲಿದ್ದನು. ತೀರದ ನೀರಿನಲ್ಲಿ ತೇಲಾಡಿಕೊಂಡು ಸುಂದರವಾದೊಂದು ಹಡಗು ಕಾಣುತ್ತಿತ್ತು. ಅದು ಪೂರ್ತಿ ಬಂಗಾರದಿಂದಲೇ ನಿರ್ಮಿಸಲ್ಪಟ್ಟ ಹಡಗಿನ ಹಾಗೆ ಜಗಜಗನೆ ಹೊಳೆಯುತ್ತಿದ್ದಿತು. ಒಳ್ಳೆಯ ಅಲಂಕಾರಗಳಿಂದ ಒಪ್ಪುವ ಹಡಗು ! ಅದರ ತೋರಣಗಳಲ್ಲಿ ವಜ್ರಗಳೂ, ವೈಡೂರ್ಯಗಳೂ ನೇತಾಡುತ್ತಿದ್ದುವು ಆ ಹಡಗಿನಲ್ಲಿ ಮನುಷ್ಯರಿರುವ ಸೂಚನೆಯೇ ಕಾಣಲಿಲ್ಲ. ಅಂತಹ ಬೆಲೆ ಬಾಳುವ ಹಡಗನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಆಶೆಯಿಂದ ಶ್ರೀಗುಪ್ತನು ಸಮುದ್ರಕ್ಕೆ ಹಾರಿ ಹಡಗಿನ ಕಡೆಗೆ ಈಜುತ್ತಾ ಹೋಗತೊಡಗಿದನು. ಈಜುತ್ತಿದ್ದಂತೆ ಸಮುದ್ರದ ತೆರೆಗಳ ಬಲದೊಂದಿಗೆ ತನ್ನ ಬಲವನ್ನು ಪ್ರಯೋಗಿಸುತ್ತಾ ಹೋಗಲು, ಅವನ ಕೈ ಕಾಲುಗಳು ಸೋಲತೊಡಗಿದುವು. ತುಂಬ ಬಲಗುಂದಿ ಅವನು ಹೊಯ್ದಾಡುತ್ತಿದ್ದಾಗ, ಯಾವುದೋ ವಿಕೃತಾಕಾರದ ಸ್ತ್ರೀ ಮೂರ್ತಿ ಅವನ ಎರಡು ಕಾಲುಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡಿತು. ಒದರಿಕೊಂಡಾಗ ಹಿಡಿಕೆ ಇನ್ನಷ್ಟು ಬಲವಾಯಿತು. ಶ್ರೀಗುಪ್ತನು ಪ್ರಾಣಭಯದಿಂದ,



"ಯಾರು ನೀನು ? ನನ್ನನ್ನೇಕೆ ಹಿಡಿದಿರುವಿ ? ಬಿಡುಬಿಡು !" ಎಂದು ಕೂಗಿಕೊಂಡನು.

"ನಾನು ದರಿದ್ರದೇವತೆ. ಇಷ್ಟು ಕಾಲದವರೆಗೆ ನಿನ್ನನ್ನು ಹಿಡಿಯಲು ನಿನ್ನ ಹಿಂದೆಯೇ ಹೊಂಚುತ್ತಿದ್ದೆ. ನನಗೆ ಸಾಧ್ಯವಾಗಲಿಲ್ಲ. ಈಗ ಸಿಕ್ಕಿದಿ ನನ್ನ ಕೈಗೆ ! ಇನ್ನು ತಪ್ಪಿಸಿಕೊಳ್ಳಲಾರೆ" ಎಂದು ದರಿದ್ರದೇವತೆ ವಿಕಟವಾಗಿ ನಗಾಡಿದಳು.

ಶ್ರೀಗುಪ್ತನು ಅವಳ ಹಿಡಿಕೆಯಿಂದ ಬಿಡಿಸಿಕೊಳ್ಳಲು ನಾನಾ ಬಗೆಯಿಂದ ಹೊಯ್ದಾಡಿದನು. ಆದರೆ ಅವಳು ಬಿಡದೆ ಅವನನ್ನು ನೀರಿನ ಬುಡಕ್ಕೆ ಎಳೆದೊಯ್ದಳು. ಅವನು ಉಸಿರು ಕಟ್ಟಿ ತಟಪಟನೆ ತುಳ್ಳುತ್ತಿರಲು ನಿದ್ದೆಹಾರಿ ಹೋಗಿ, ಎಚ್ಚರವಾಯಿತು. ಕಂಡದ್ದೆಲ್ಲ ಕನಸೆಂದು ತಿಳಿಯಿತು.

ಈ ಸ್ವಪ್ನವನ್ನು ನೆನೆದು ಶ್ರೀಗುಪ್ತನು ತುಂಬ ಹೆದರಿದನು. ಅವನು ಮಲಗಿದಲ್ಲಿಂದ ಎದ್ದು ಸಾಯಂಕಾಲದ ವರೆಗೂ ನಡೆದನು. ಕತ್ತಲೆ





ಯಾಗುವ ಹೊತ್ತಿಗೆ. ಒಂದಾನೊಂದು ಊರಿನ ಛತ್ರವನ್ನು ತಲಪಿದನು. ಆ ಭಯಂಕರ ಕನಸನ್ನು ಕುರಿತ ಆಲೋಚನೆಗಳಿಂದ ಆ ರಾತ್ರಿ ಅವನಿಗೆ ನಿದ್ದೆಯೇ ಬರಲಿಲ್ಲ. ಸಮುದ್ರ ವ್ಯಾಪಾರದಲ್ಲಿ ಹಾಕುವ ಮೂಲಧನವು ನೀರಪಾಲಾದಂತೆಯೇ ಸರಿ ಎಂದು ಆ ಕನಸು ತನಗೆ ಎಚ್ಚರಿಕೆ ಕೊಟ್ಟಿತೆಂದು ಅವನಿಗೆ ತೋರಿತು. ಬೆಳಗಾದ ಕೂಡಲೇ ನಗರಕ್ಕೆ ಹೋಗುವ ಆಲೋಚನೆಯನ್ನು ಬಿಟ್ಟು, ಹಿಂದಿರುಗಿ ಮನೆಗೆ ಪ್ರಯಾಣ ಮಾಡತೊಡಗಿದನು.

ಈ ಸಾರಿ ನಡು ಮಧ್ಯಾಹ್ನದ ಹೊತ್ತಿಗೆ ಅವನು ಒಂದು ಕೆರೆಯ ಬದಿಯನ್ನು ಸೇರಿ, ಅಲ್ಲಿದ್ದ ಅರಳೀ ಮರದ ಬುಡದಲ್ಲಿ ವಿಶ್ರಾಂತಿಗಾಗಿ ಮಲಗಿದನು. ಕರೆಯಿಂದ ಬರುವ ತಣ್ಣಗಿನ ಗಾಳಿಯಿಂದಾಗಿ ಶ್ರೀಗುಪ್ತನಿಗೆ ಕೂಡಲೇ ನಿದ್ರೆ ಹಿಡಿಯಿತು. ಆ ನಿದ್ರೆಯಲ್ಲಿ ಒಂದು ಸ್ವಪ್ನ ! ಮತ್ತೆ ಅದೇ ಬಂಗಾರದ ವಜ್ರವೈಡೂರ್ಯ ತೋರಣಗಳ ಹಡಗು ಸಮುದ್ರದಲ್ಲಿ ಕಾಣುತ್ತಿದೆ. ನಿಂತಿದ್ದ ಶ್ರೀಗುಪ್ತನು ಆ ಹಡಗನ್ನು ಸೇರಲು ಸಮುದ್ರಕ್ಕೆ ಹಾರಿ ಈಜುತ್ತಿದ್ದಾನೆ. ಈಜುತ್ತಾ ಬಳಲಿ ಹೋದ ಸಮಯದಲ್ಲಿ ಸುಂದರಿಯಾದ ಸ್ತ್ರೀಯೊಬ್ಬಳು ಅವನ ಮುಂದೆ ಪ್ರತ್ಯಕ್ಷಳಾದಳು.

"ಯಾರು ನೀನು? ನನ್ನ ದಾರಿಗೆ ಅಡ್ಡ ಬರಬೇಡ. ಬದಿಗೆ ಸರಿ!" ಎಂದು ಶ್ರೀಗುಪ್ತನು ಅವಳನ್ನು ಕೋಪದಿಂದ ನೋಡುತ್ತಾ ಹೇಳಿದನು.

ಆಕೆ ಮುಗುಳು ನಕ್ಕು, "ನಾನು ನಿನ್ನ ಅದೃಷ್ಟ ದೇವತೆ. ಇಷ್ಟು ಕಾಲ ನಿನ್ನ ಹತ್ತಿರ ಬರಬೇಕೆಂದು ನನಗೆ ತೋರಲಿಲ್ಲ. ಈಗ ನಿನ್ನ ಪುಣ್ಯದಿಂದ ನಿನಗೆ ನನ್ನ ಅಗತ್ಯ ಬಂದಿದೆ" ಎಂದು ಶ್ರೀಗುಪ್ತನ ಕೈಗಳನ್ನು ಹಿಡಿದಳು.

ಆಮೇಲೆ ಅವನಿಗೆ ಈಜುವ ಶ್ರಮವೇ ತಪ್ಪಿತು. ಅವಳು ಅವನನ್ನು ಹಡಗಿನ ಒಳಭಾಗಕ್ಕೆ ಕರೆದುಕೊಂಡು ಹೋಗಿ, ಮಾಯವಾಗಿ ಹೋದಳು. ಅಲ್ಲಿಯ ದೃಶ್ಯವನ್ನು ನೋಡಿ ಶ್ರೀಗುಪ್ತನಿಗೆ ಅತ್ಯಾಶ್ಚರ್ಯವಾಯಿತು. ಅಲ್ಲಿ ಅವನ ಮುಂದೆ ಇದ್ದುದು ತನ್ನ ಊರಲ್ಲಿರುವ ತನ್ನದೇ ಆದ ನಗಗಳ ಅಂಗಡಿ. ಈ ಆಶ್ಚರ್ಯಾಘಾತದಿಂದ ಅವನಿಗೆ ಎಚ್ಚರವಾಯಿತು.

ಶ್ರೀಗುಪ್ತನು ಸ್ವಲ್ಪ ಹೊತ್ತು ತನಗೆ ಬಂದ ಸ್ವಪ್ನವನ್ನು ಕುರಿತು ಆಲೋಚನೆ ಮಾಡಿ ಎದ್ದು ಕೆರೆಗಿಳಿದು ಕೈ ಕಾಲು ಮುಖ ತೊಳೆದುಕೊಂಡು ತನ್ನ ಮನೆಯ ದಾರಿ ಹಿಡಿದು ನೆಮ್ಮದಿಯಾಗಿ ನಡೆಯ ತೊಡಗಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ನಿಲ್ಲಿಸಿ, "ರಾಜಾ, ಶ್ರೀಗುಪ್ತನ ಪ್ರವರ್ತನೆ ವಿಚಿತ್ರವಾಗಿ ಕಾಣುತ್ತದಷ್ಟೆ? ಅವನು ಕನಸಿನಲ್ಲಿ ದರಿದ್ರದೇವತೆ ಕಂಡಾಗಲೂ, ಸಮುದ್ರ ವ್ಯಾಪಾರ ಬೇಡವೆಂದುಕೊಂಡನು. ಅದೃಷ್ಟ ದೇವತೆ ಕಂಡಾಗಲೂ ಹಾಗೆಯೇ ಅಂದುಕೊಂಡಿದ್ದಾನೆ.

ಭಿನ್ನವಾದ ಎರಡು ಕನಸುಗಳ ಮೇಲೆಯೂ ಅವನ ನಿಶ್ಚಯ ಒಂದೇ ಬಗೆಯಾಗಿರುವುದು ಆಶ್ಚರ್ಯ ವಲ್ಲವೆ ? ದರಿದ್ರ ಅದೃಷ್ಟದೇವತೆಗಳಿಬ್ಬರೂ ಅವನ ಅಭಿಪ್ರಾಯದಲ್ಲಿ ಸಮಾನರೆಂಬಂತೆ ಕಾಣುತ್ತದೆ. ಇದಕ್ಕಿಂತ ಹೆಚ್ಚಿನ ಮೂರ್ಖತನ ಬೇರೇನಿದೆ ? ಅವನು ಸ್ನೇಹಿತನ ಸಲಹೆಯಂತೆ ನಡೆಯದೆ ಹೋಗಲು ಕನಸುಗಳ ಪ್ರಭಾವದ ಹೊರತು ಬೇರೆ ನಾದರೂ ಕಾರಣವಿದೆಯೆ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಸಾವಿರ ಚೂರುಗಳಾಗುತ್ತವೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಸಾಧಾರಣ ವಾಗಿ ಮಾನವನು ಲೌಕಿಕ ಜೀವಿಯಾಗಿದ್ದಾನೆ. ಮನಸ್ಸನ್ನು ಆಶಾ ದುರಾಶೆಗಳಂಥವು ಹಿಡಿದು ಪೀಡಿಸುತ್ತಿದ್ದರೂ, ಪರಮ ಮೂಢರ ಸಂಗತಿ ಏನಾದರೂ ಇರಲಿ, ವಿವೇಕಿಯಾದವನು ಅವುಗಳನ್ನು ವಶಪಡಿಸಿ ತನ್ನ ಹದ್ದಿನೊಳಗೆ ಇರಿಸಿಕೊಳ್ಳುತ್ತಾನೆ. ಶ್ರೀಗುಪ್ತನು ಸಾಧ್ಯಾಸಾಧ್ಯತೆಗಳನ್ನು ಯೋಚಿಸ ಲಾಗದ, ಕೇವಲ ಧನದ ಆಶೆಯುಳ್ಳವನಾಗಿರುತ್ತಿದ್ದರೆ, ತನ್ನ ಬಾಲ್ಯ ಸ್ನೇಹಿತನ ಸಲಹೆಯನ್ನು ಕುರಿತು ಆಲೋಚಿಸಲು ಅವಕಾಶ ಕೇಳುತ್ತಿದ್ದಿಲ್ಲ. ಸಮುದ್ರ ವ್ಯಾಪಾರದಲ್ಲಿ ಕೋಟಾನುಕೋಟಿ ಗಳಿಸಿಕೊಂಡವರ ಹಾಗೆಯೇ ಕೋಟಾನುಕೋಟಿ ಕಳೆದುಕೊಂಡವರು ಕೂಡಾ ಇದ್ದಾರೆಂಬುದು ಶ್ರೀಗುಪ್ತನಂತಹ ವ್ಯಾಪಾರಿಗೆ ಗೊತ್ತೇ ಇದೆ. ಮಾವಿನ ತೋಪಿನಲ್ಲಿ ಕಂಡ ಸ್ವಪ್ನದ ದರಿದ್ರ ದೇವತೆಯೂ, ಕೆರೆಯ ದಂಡೆಯಲ್ಲಿ ಕಂಡ ಕನಸಿನ ಅದೃಷ್ಟ ದೇವತೆಯೂ ಶ್ರೀಗುಪ್ತನ ಮನಸ್ಸಿನಲ್ಲಿ ಸಾಗುತ್ತಿರುವ ತರ್ಕವಿ ತರ್ಕಗಳಿಗೆ ಪ್ರತಿರೂಪಗಳಾಗಿವೆ. ದರಿದ್ರ ದೇವತೆ ಮಾಡಿದ ಕೆಲಸ ಅವನಿಗೆ ಭಯವನ್ನುಂಟು ಮಾಡಿದೆ. ಅದೃಷ್ಟ ದೇವತೆ ಅವನನ್ನು ಬಂಗಾರದ ಹಡಗಿಗೆ ಸೇರಿಸಿದಾಗ ಅವನು ಅಲ್ಲಿ ಕಂಡದ್ದು ತನ್ನ ನಗಗಳ ಅಂಗಡಿಯನ್ನೇ. ಅಂದರೆ ಇರುವುದನ್ನು ನೋಡಿ ತೃಪ್ತಿಪಡು; ವಂಶಪಾರಂಪರ್ಯವಾಗಿ ಸಂಕ್ರಮಿಸಿ, ಒಳ್ಳೆಯ ಅನುಭವ ಪಡೆದ ನಿನ್ನ ನಗಗಳ ವ್ಯಾಪಾರ ವನ್ನು ಬಿಟ್ಟು, ಗೊತ್ತಿಲ್ಲದ ಹೊಸ ವ್ಯಾಪಾರಕ್ಕೆ ತಲೆ ಹಾಕಬೇಡವೆಂಬ ಸೂಚನೆಯೂ ಕನಸುಗಳಿಂದ ಅವನಿಗಾಯಿತು. ಎಚ್ಚರಿಕೆಯೂ ಅದರೊಂದಿಗಿದ್ದಿತು. ಆದುದರಿಂದ ಶ್ರೀಗುಪ್ತನ ನಿರ್ಣಯಕ್ಕೆ ಕನಸುಗಳ ಪ್ರಭಾವವೇ ಕಾರಣ. ಬೇರೆ ಕಾರಣಗಳೇನಿಲ್ಲ".

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆ ಹಿಡಿದು ನೇತಾಡ ತೊಡಗಿತು.





# ಪಾತ್ರ

ಹಿಂದೆ ಧವಳಗಿರಿ ಎಂಬೊಂದು ದೊಡ್ಡ ರಾಜ್ಯವಿದ್ದಿತು. ಆ ರಾಜ್ಯದ ಪಕ್ಕದಲ್ಲೇ ಹೇಮಗಿರಿ ಎಂಬ ರಾಜ್ಯವೂ ಇದ್ದಿತು. ಆ ಎರಡು ರಾಜ್ಯಗಳ ಮಧ್ಯೆ ಯಾವಾಗಲೂ ಏನೋ ಕಿಸಿವಿಸಿ. ಎಷ್ಟೋ ಸಮಸ್ಯೆಗಳು. ಅವೆಲ್ಲಾ ಸೇರಿ ಕಡೆಗೆ ಒಂದು ದಿನ ಯುದ್ಧಕ್ಕೆ ದಾರಿಯಾಗುವ ಪರಿಸ್ಥಿತಿಯುಂಟಾಯಿತು.

ಧವಳಗಿರಿಯ ಪಾಲಕನಾದ ಧನಂಜಯ ರಾಜನು ಯಾವಾಗೆಂದರಾವಾಗ ದಂಡೆತ್ತಿ, ಸುಲಭವಾಗಿಯೇ ಹೇಮಗಿರಿಯನ್ನು ಜಯಿಸಿ ಬಿಡಬಲ್ಲನು. ಆದರೆ ಈ ಪದ್ಧತಿ ಅವನಿಗೆ ಇಷ್ಟವಿರಲಿಲ್ಲ, ತಾನು ಯುದ್ಧ ಮಾಡಿ ಹೇಮಗಿರಿಯನ್ನು ಆಕ್ರಮಿಸಿಕೊಂಡರೆ ನೆರೆಹೊರೆಗಳಲ್ಲಿರುವ ಇತರ ರಾಜ್ಯಗಳ ಪಾಲಕರು ತಾನು ಅನ್ಯಾಯ ಮಾಡಿದನೆಂದು ತನ್ನ ಮೇಲೆ ರೇಗಿಕೊಳ್ಳಬಹುದು. ಅವುಗಳ ಸಹಾನುಭೂತಿಗಳು ಹೇಮಗಿರಿಯ ಮೇಲೆ ತನ್ನಂತೆ ಬರಬಹುದು. ಅದರಿಂದ ಮುಂದೆ ಅನೇಕ ಉಪದ್ರವಗಳು ತಲೆಎತ್ತಬಹುದು.

ಧನಂಜಯನು ಇದನ್ನೆಲ್ಲ ಆಲೋಚಿಸಿ, ತನ್ನ ರಾಜ್ಯಕ್ಕೂ ಹೇಮಗಿರಿ ರಾಜ್ಯಕ್ಕೂ ನಡುವಿನಲ್ಲಿರುವ ಸಮಸ್ಯೆಗಳನ್ನು, ಪ್ರಶ್ನೆಗಳನ್ನು ಮಾತುಕತೆಗಳ ಮೂಲಕ ಪರಿಷ್ಕರಿಸಿಕೊಳ್ಳಲು ತಾನು ಸಿದ್ಧನಿರುವೆನೆಂದೂ, ಒಂದು ವೇಳೆ ಆ ಮಾತುಕತೆಗಳು ಸಫಲವಾಗದೆ ಹೋದ ಪಕ್ಷದಲ್ಲಿ ಯುದ್ಧವು ತಪ್ಪಲಾರದೆಂದೂ ಹತ್ತು ಜನರಿಗೆ ತಿಳಿಯುವ ಹಾಗೆ ಪ್ರಕಟಪಡಿಸಿದನು. ತರುವಾಯ ಒಂದು ಲೇಖನದ ದ್ವಾರಾ ತನ್ನ ಷರತ್ತುಗಳನ್ನು ವಿವರಿಸಿ, ಹೇಮಗಿರಿ ರಾಜನಾದ ಹಿರಣ್ಯವದನನಿಗೆ ತಲಪಿಸಿದನು.

ಹಿರಣ್ಯವದನ ರಾಜನ ಮಂತ್ರಿಯಾದ ಮಹೇಶ್ವರನು ಆ ಪತ್ರವನ್ನು ಓದಿ, ರಾಜನೊಂದಿಗೆ, "ಮಹಾರಾಜರೇ, ಈ ಪತ್ರವು ಧನಂಜಯನ ರಾಜಕೀಯ ಚತುರತೆಗೆ ಒಂದು ಮಾದರಿ. ಇದರೊಳಗಿನ ಅಂಶಗಳೆಲ್ಲವನ್ನೂ, ಚೆನ್ನಾಗಿ ಪರಿಶೀಲಿಸಿ ನೋಡಿದರೆ ಅವನು ಮಾತುಕತೆಯ ಹೆಸರಿನಲ್ಲಿ ತನ್ನ ಷರತ್ತುಗಳ ಪ್ರಕಾರವೇ ಒಪ್ಪಂದ ಮಾಡಿಕೊಳ್ಳುವಂತಹ ಹಂಚಿಕೆ ಹಾಕಿದ್ದಾನೆಂದು ತಿಳಿದು ಹೋಗುತ್ತದೆ" ಎಂದನು.

"ಹೌದೌದು. ಅವನ ಹಂಚಿಕೆ ಅದೇ, ಅದೇ" ಎಂದನು ಹಿರಣ್ಯವದನ ರಾಜ.



ಜೆ. ರತ್ನ





"ನಾವು ಯುದ್ಧ ಮಾಡುವ ಪರಿಸ್ಥಿತಿಯಲ್ಲಿಲ್ಲ ವೆಂದು ಅವನಿಗೆ ಗೊತ್ತಿದೆ. ಮಾತುಕತೆಗೆ ನಾವು ಒಪ್ಪದೆ ಹೋದರೆ ಅವನು ಮರುಕ್ಷಣದಲ್ಲೇ ನಮ್ಮ ಮೇಲೆ ದಂಡೆತ್ತಿ ಬರುತ್ತಾನೆ. ನಮಗೆ ತಕ್ಕ ಅವಕಾಶ ಕೊಟ್ಟ ಅನಂತರವೇ ತಾನು ಆ ಕೆಲಸ ಮಾಡಿದೆ ನೆಂದು ಹತ್ತು ಮಂದಿಯೊಂದಿಗೆ ಹೇಳಿಕೊಳ್ಳಲು ಈ ಮಾತುಕತೆಗಳ ವ್ಯವಹಾರವನ್ನು ಸೃಷ್ಟಿಸಿದ್ದಾನೆ ಆ ರಾಜ" ಎಂದನು ಮಂತ್ರಿ ಮಹೇಶ್ವರ.

"ಹಾಗಾದರೆ ಅವನೊಡನೆ ಸಂಭಾಷಣೆ ಪ್ರಾರಂಭಿಸದೆ ತಪ್ಪದು ಎನ್ನುವಿರಾ ?" ಎಂದು ಹಿರಣ್ಯವದನ ರಾಜನು ಕೇಳಿದನು.

ಹಾಗೆ ಮಾಡದೆ ತಪ್ಪಿಸಲು ಸಾಧ್ಯವಿಲ್ಲವೆಂದು ಮಂತ್ರಿ ಹೇಳಿ, "ಇದಕ್ಕೆ ತಕ್ಕ ವ್ಯಕ್ತಿಯನ್ನು ಆರಿಸಿ ನಾವು ಕಳುಹಿಸಬೇಕಾಗಿದೆ" ಎಂದನು.

"ಅಂತಹ ವ್ಯಕ್ತಿ ನಿಮ್ಮ ದೃಷ್ಟಿಯಲ್ಲಿ ಯಾರಾದರೂ ಇರುವರೆ ?" ಎಂದು ಹಿರಣ್ಯವದನನು ಪ್ರಶ್ನಿಸಿದನು.

ಅದಕ್ಕೆ ಮಂತ್ರಿ, "ನಮ್ಮ ಪುರೋಹಿತನಾದ ಪುಷ್ಕರನು ಒಳ್ಳೆಯ ಮಾತುಗಾರ. ತನ್ನ ವಾಗ್ಧಾಟಿ ಯಿಂದ ಎಂತಹ ಮೇಧಾವಿಗಳನ್ನಾದರೂ ಆಕರ್ಷಿಸಿ ಬಿಡಬಲ್ಲವನು. ಅವನನ್ನು ನಮ್ಮ ಪರವಾಗಿ ಈ ಮಾತುಕತೆ ನಡೆಸಲಿಕ್ಕೆ ಕಳುಹಿಸಬಹುದೆಂದು ನನಗೆ ತೋರುತ್ತದೆ" ಎಂದನು.

ಹಿರಣ್ಯವದನನು ಕಿರುನಗುವನ್ನು ಸೂಸಿ. "ಹಗ್ಗ ಹಿಡಿದೇರುವವನ ತಲೆಮೆಟ್ಟಿ ಕೋಲು ಹಿಡಿದೇರುವವ ನಿರುತ್ತಾನೆ. ಧನಂಜಯನ ಆಸ್ಥಾನ ಕವಿ ಅಪೂರ್ವನ ಸಂಭಾಷಣಾ ಚತುರತೆ ಎಂತಹುದೆಂದು ನಾವು ಕತೆ ಕತೆಯಾಗಿ ಕೇಳುತ್ತಲೇ ಇದ್ದೇವೆ. ನಾವು ಪುರೋಹಿತ ಪುಷ್ಕರನನ್ನು ದೂತನಾಗಿ ಕಳುಹಿಸಿದ ಪಕ್ಷದಲ್ಲಿ, ಧನಂಜಯನು ಅವನನ್ನು ತನ್ನ ದೂತನಾಗಿ ಮಾಡಿ ಕೊಳ್ಳುವ ಅವಕಾಶವಿರುತ್ತದೆ. ಅಪೂರ್ವನ ಸಂಭಾಷಣಾ ವೈಖರಿ ಅಂತಹುದು. ಒಟ್ಟಿನ ಮೇಲೆ ಮಾತುಗಳ ಗಾರುಡಿಯಿಂದ ಇಂತಹುದರಲ್ಲಿ ಜಯಿಸ ಲಾರೆವೆಂದೇ ನನಗೆ ತೋರುತ್ತದೆ" ಎಂದನು.

ಮಂತ್ರಿ ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ರಾಜಕೀಯ ಪ್ರಾಧಾನ್ಯತೆಯ ಇಂತಹ ಸಂಭಾಷಣೆ ನಡೆಯುವಾಗ, ಹಿಡಿಯುವುದು, ಬಿಡುವುದು, ಪಡೆಯುವುದು, ಕೊಡುವುದು ಮುಂತಾದುವು ಗಳನ್ನು ಅನುಸರಿಸಬೇಕೆಂದು ಹೇಳುತ್ತಾರೆ. ನಿರಂಜನನು ನಮ್ಮ ನಗರದಲ್ಲಿ ಪ್ರಮುಖ ವ್ಯಾಪಾರಿ. ಒಳ್ಳೆಯ ವ್ಯವಹಾರದಕ್ಷನೂ ಹೌದು. ಅವನನ್ನು ನಾವು ಧವಳಗಿರಿಗೆ ನಮ್ಮ ದೂತನಾಗಿ ಕಳುಹಿಸಿದರೆ ಹೇಗಿದ್ದೀತು ?" ಎಂದನು.

ಅದಕ್ಕೆ ಹಿರಣ್ಯವದನ ರಾಜನು, "ನಮ್ಮ ಈಗಿನ ಬಲಹೀನತೆಗಳನ್ನು ತಿಳಿದುಕೊಂಡಿದ್ದ ಧನಂಜಯನು ಎಷ್ಟೋ ಒತ್ತಡಗಳನ್ನು ನಮ್ಮ ಮೇಲೆ ತರಲು ಪ್ರಯತ್ನಿಸುತ್ತಾನೆ. ವ್ಯಾಪಾರದವರಿಗೆ ಹಣದ ವಿಷಯದಲ್ಲಿ ಮಾತ್ರ ಹಿಡಿತವಿರುತ್ತದೆಯೇ ಹೊರತು,





ಮತ್ತಾವುದರ ಮೇಲೂ ಲಕ್ಷ್ಯವಿರದು. ವರ್ತಕ ನಿರಂಜನನು ಅನೇಕ ವಿಷಯಗಳನ್ನೊಳಗೊಂಡ ರಾಜಕೀಯ ದೂತನಾಗಲು ಅರ್ಹನಲ್ಲ" ಎಂದನು.

ಪಕ್ಕದಲ್ಲಿದ್ದು ಇದೆಲ್ಲವನ್ನೂ ಕೇಳಿಕೊಂಡಿದ್ದ ವಿದೂಷಕನಾದ ವಿನೋದನು ಮುಂದೆ ಬಂದು ರಾಜನಿಗೆ ಕೈ ಮುಗಿದು, "ಒಂದು ಬಿನ್ನಹ ಮಹಾ ರಾಜಾ! ಪುಷ್ಕರ ಪುರೋಹಿತನೂ, ನಿರಂಜನ ವರ್ತಕನೂ ಈ ದೌತ್ಯಕಾರ್ಯಕ್ಕೆ ಸರಿಯಾದವರಲ್ಲ ವೆಂದು ನಿಮಗೆ ತೋರಿದರೆ, ನನಗೆ ಈ ಅವಕಾಶ ವನ್ನು ಏತಕ್ಕೆ ಕೊಡಬಾರದು ?" ಎಂದೊಂದು ಪ್ರಶ್ನೆಯನ್ನು ನಿವೇದಿಸಿಕೊಂಡನು.

ಆ ಮಾತು ಕೇಳಿ ಮಂತ್ರಿ ಅವಹೇಳನೆಯ ಭಾವದಲ್ಲಿ, "ಇದೇನಾದರೂ ಹಾಸ್ಯ ವ್ಯವಹಾರ ವಾಗಿರುತ್ತಿದ್ದರೆ, ಮಹಾರಾಜರು ನಿನ್ನನ್ನೇ ದೂತನಾಗಿ ಕಳುಹಿಸುತ್ತಿದ್ದರು" ಎಂದನು.

ಆಗ ಹಿರಣ್ಯವದನ ರಾಜನು ವಿನೋ ಗುರುತಿಗೆ ತಂದುಕೊಂಡವನಂತೆ, "ವಿನೋದಾ ! ಧವಳಗಿರಿಗೆ ದೂತನಾಗಿ ಹೋಗಲು ನೀನು ಅರ್ಹನೆಂಬುದು ನಿಜವೇ. ಒಂದೆರಡು ದಿನಗಳಲ್ಲಿ ಹೊರಡಬೇಕು. ಅಗತ್ಯವಾದ ಏರ್ಪಾಡು ಮಾಡಿ ಸಿದ್ಧನಾಗು" ಎಂದನು. ರಾಜನು ಹೀಗೆ ಹೇಳಿದುದನ್ನು ಕೇಳಿ, ಮಂತ್ರಿ ಮಹೇಶ್ವರನು ಆಶ್ಚರ್ಯದಿಂದ ರಾಜನನ್ನು ಪ್ರಶ್ನಾರ್ಥಕವಾಗಿ ನೋಡಿದನು. ಆಗ ರಾಜನು ವಿನೋದನ ಸಂಭಾಷಣೆಯ ನೈಪುಣ್ಯತೆಯನ್ನು ಚೆನ್ನಾಗಿ ತಿಳಿದವನಾದುದರಿಂದಲೇ ಈ ನಿರ್ಣಯಕ್ಕೆ ಬಂದಿದ್ದೇನೆ. ವಿನೋದನು ನಮ್ಮ ದೂತನಾಗಿ ಅಲ್ಲಿಗೆ ಹೋಗಿ, ಇದಿರು ಪಕ್ಷದೊಂದಿಗೆ ಯಾವ ವಿಧವಾಗಿಯೂ ಏಕೀಭವಿಸದೆ, ಸಂಭಾಷಣೆ ಗಳನ್ನು ಮಾತ್ರ ಮುರಿಯದೆ ಸುದೀರ್ಘ ಕಾಲ ಸಾಗಿಸುವವನಾಗುತ್ತಾನೆ. ಅಂತಹ ಚಾತುರ್ಯ ಇವನಿಗಿದೆ " ಎಂದನು.

ವಿನೋದನು ರಾಜನ ಪ್ರತಿನಿಧಿಯಾಗಿ ಹೋಗಿ ಧವಳಗಿರಿ ರಾಜನೊಂದಿಗೆ ಮಾತುಕತೆ ಪ್ರಾರಂಭಿಸಿದನು. ಅದು ಎಷ್ಟಕ್ಕೂ ಮುಗಿಯದೆ ಹಾಗೆ ಸಾಗಿಕೊಂಡೇ ಇದ್ದಿತು. ಧವಳಗಿರಿಯೊಂದಿಗೆ ಏಕೀಭವಿಸದೆ, ಸಂಭಾಷಣೆಯನ್ನು ಭಗ್ನಗೊಳಿಸದೆ ಮುಂದುವರಿದು ಕೊಂಡಿದ್ದಿತು. ಇಷ್ಟರೊಳಗೆ ಒಂದು ವೇಳೆ ಧನಂಜಯನು ಯುದ್ಧಕ್ಕೆ ಸಿದ್ಧನಾಗಿ ಬಂದುಬಿಟ್ಟರೆ, ಅದನ್ನು ಇದಿರಿಸಲು ಹಿರಣ್ಯವದನನು ತಕ್ಕ ಏರ್ಪಾಡು ಗಳನ್ನು ಮಾಡಿಕೊಂಡನು. ಧನಂಜಯನು ಸಂಭಾಷಣೆ ಯನ್ನು ಭಗ್ನಮಾಡಲಿಲ್ಲ. ಯುದ್ಧಕ್ಕೂ ಸಿದ್ಧನಾಗ ಲಿಲ್ಲ. ವಿದೂಷಕ ವಿನೋದನು ಅವನ ದರಬಾರಿನಲ್ಲಿ ಹೇಮಗಿರಿಯ ಶಾಶ್ವತ ರಾಯಭಾರಿಯಾಗಿ ಅಲ್ಲೇ ಮಾತುಕತೆ ಯಾಡಿಕೊಂಡಿದ್ದನು.



# ಪರಮ ಶುಂಠ

ಒಂದು ಕಾಲದಲ್ಲಿ ಆ ಕಾಲದ ಪಂಡಿತರಿಗಿಂತ ದೊಡ್ಡವನೆಂದು ಖ್ಯಾತಿ ಪಡೆದ ಶಿವಸೂರಿ ಎಂಬ ವೃದ್ಧ ಪಂಡಿತನು, ಒಂದಾನೊಂದು ಗುರಕುಲದ ಯಜಮಾನನ ಆಹ್ವಾನದ ಮೇಲೆ ಅಲ್ಲಿಗೆ ಬಂದನು. ಅಲ್ಲಿ ನೆರೆದ ವಿದ್ಯಾರ್ಥಿಗಳ ಸಭೆಯಲ್ಲಿ ಆತನ ಉಪನ್ಯಾಸವು ನಡೆಯಿತು. ಆಧ್ಯಾತ್ಮಿಕ ವಿಷಯವನ್ನು ಕುರಿತು ಶಿವಸೂರಿ ಒಂದು ಗಂಟೆ ಹೊತ್ತು ಭಾಷಣ ಮಾಡಿದನು.

ಆಮೇಲೆ ಶಿವಸೂರಿ ವಿದ್ಯಾರ್ಥಿಗಳನ್ನು ನೋಡಿ, "ನಾನು ಮಾತಾಡಿದುದನ್ನು ಕುರಿತು ನಿಮ್ಮ ಅಭಿಪ್ರಾಯವೇನೆಂದು ಒಂದೇ ವಾಕ್ಯದಲ್ಲಿ ಬರೆದು ಕೊಡಿ" ಎಂದನು.

ವಿದ್ಯಾರ್ಥಿಗಳೆಲ್ಲಾ ಅವರವರಿಗ ತೋರಿದ ಅಭಿಪ್ರಾಯವನ್ನು ತಾಲ ಪತ್ರದಲ್ಲಿ ಬರೆದು ಪಂಡಿತನಿಗೆ ಕೊಟ್ಟರು. ಅವುಗಳಲ್ಲಿ ಒಂದರ ಮೇಲೆ "ಪರಮ ಶುಂಠ" ಎಂದು ಬರೆದಿದ್ದಿತು.

ಶಿವಸೂರಿ ಆ ತಾಲ ಪತ್ರವನ್ನು ವಿದ್ಯಾರ್ಥಿಗಳ ಕಡೆಗೆ ತೋರಿಸುತ್ತ, "ನಾನು ಈವರೆಗೆ ಅನೇಕ ಗುರುಕುಲಗಳಲ್ಲಿ ಉಪನ್ಯಾಸವಿತ್ತಿದ್ದೇನೆ. ಅನೇಕ ಸಂದರ್ಭಗಳಲ್ಲಿ ವಿದ್ಯಾರ್ಥಿಗಳು ತಮ್ಮ ಅಭಿಪ್ರಾಯ ಬರೆದು ಅವರ ಹೆಸರು ಬರೆಯಲು ಮರೆತು ಬಿಡುತ್ತಾರೆ. ಆದರೆ ಇದು ನನಗೆ ವಿಚಿತ್ರ ಅನುಭವ. ಈ ವಿದ್ಯಾರ್ಥಿ ಪಾಪ, ತನ್ನ ಹೆಸರು ಮಾತ್ರ ಬರೆದು ಅಭಿಪ್ರಾಯ ಬರೆಯಲು ಮರೆತು ಬಿಟ್ಟನು." ಎಂದನು.

ಪರಮ ಶುಂಠ ಎಂದು ಬರೆದ ವಿದ್ಯಾರ್ಥಿ ನಾಚಿ ತಲೆ ತಗ್ಗಿಸಿಕೊಂಡನು.





# ರಾಜನೀತಿಳುವಳಿಕೆ

ಹಿಂದೆ ಅರುಣಗಿರಿ ನಗರವನ್ನು ಪಾಲಿಸುವ ಪ್ರತಾಪ ಸೇನ ಮಹಾರಾಜನಿಗೆ, ಇದ್ದಕ್ಕಿದ್ದ ಹಾಗೆ ಏನೋ ಒಂದು ತಳ ತಿಳಿಯದ ರೋಗದಿಂದ ಮಾತು ಬಿದ್ದು ಹೋಯಿತು. ಆ ಕಾರಣದಿಂದ ಯುವರಾಜನಾದ ಪ್ರಸೇನನು, ಅರ್ಧಾಂತರದಲ್ಲಿಯೇ ರಾಜನಾಗಿ ಸಿಂಹಾಸನವೇರಬೇಕಾಗಿ ಬಂದಿತು.

ರಾಜಕುಮಾರನಾಗಿ ಯುವರಾಜನೆನಿಸಿದ್ದರೂ ಪ್ರಸೇನನಿಗೆ ಲೋಕಜ್ಞಾನವಿರಲಿಲ್ಲ. ಆದರೆ ಬಾದರಾಯಣನೆಂಬ ಮಂತ್ರಿ ಅತ್ಯಂತ ಮೇಧಾವಿ ಯಾಗಿದ್ದನು. ಅವನ ಸಲಹೆಗಳನ್ನೂ, ಸೂಚನೆ ಗಳನ್ನೂ ಹಿಡಿದುಕೊಂಡು ಪ್ರಸೇನನು ಬಹಳ ಚೆನ್ನಾಗಿ ರಾಜ್ಯಪಾಲನೆಯನ್ನು ನಿರ್ವಹಿಸುತ್ತ, ತಂದೆಗಿಂತ ಒಳ್ಳೆಯ ಹೆಸರನ್ನೇ ಪಡೆಯತೊಡಗಿದನು.

ಹೀಗಿರುವಾಗ ಮಹಾರಾಜ ಪ್ರತಾಪಸೇನನ ರೋಗ ಗುಣವಾಗಿ ಹೋಯಿತು. ತನ್ನ ಕುಮಾರನು ಬಹಳ ಚೆನ್ನಾಗಿ ರಾಜ್ಯಪಾಲನೆ ಮಾಡುವುದನ್ನು ಗಮನಿಸಿ, ಅವನಿಗೆ ಬಹಳ ತೃಪ್ತಿಯಾದುದರಿಂದ, ಮತ್ತೆ ಸ್ವಲ್ಪ ಕಾಲ ವಿಶ್ರಾಂತಿಯಾಗಿ ಅಂತಃಪುರದಲ್ಲೇ ಇದ್ದುಬಿಟ್ಟನು.

ಎಲ್ಲವೂ ಒಳ್ಳೆಯ ರೀತಿಯಲ್ಲಿ ನಡೆದುಕೊಂಡಿದ್ದ ಸಮಯದಲ್ಲಿ, ದುರದೃಷ್ಟವಶಾತ್ತಾಗಿ ಮಂತ್ರಿ ಬಾದ ರಾಯಣನು ತೀರಿಹೋದನು. ಮಂತ್ರಿ ಇಲ್ಲದೆ ತನಗೆ ಒಂದು ಕ್ಷಣವೂ ನಡೆಯಲಾರದೆಂದು ತಿಳಿದು ಕೊಂಡಿದ್ದ ಪ್ರಸೇನನು ಕೂಡಲೇ ಮಂತ್ರಿಯನ್ನು ಆರಿಸಿಕೊಳ್ಳಲಿಕ್ಕೆ ಸಿದ್ಧನಾದನು.

ಮಹಾರಾಜಾ ಪ್ರತಾಪಸೇನನು ಹೊಸ ಮಂತ್ರಿಯ ಆಯ್ಕೆಯಲ್ಲಿ ಕುಮಾರನಿಗೆ ಸಹಾಯಮಾಡಬೇಕೆಂದಿ ದ್ದನು. ಆಗ ಪ್ರಸೇನನು ತಂದೆಯೊಂದಿಗೆ, " ಮಂತ್ರಿ ಇಲ್ಲದೆ ರಾಜ್ಯಪಾಲನೆ ಮಾಡುವ ಬುದ್ಧಿವಂತಿಕೆ ನನಗಿಲ್ಲದಿದ್ದರೂ ನನಗೆ ಬೇಕಾದ ಮಂತ್ರಿಯನ್ನು ಆರಿಸಿಕೊಳ್ಳುವಷ್ಟರ ಮಟ್ಟಿಗೆ ತಿಳುವಳಿಕೆ ಮಾತ್ರ ನನಗಿದೆ ಅಪ್ಪಾ " ಎಂದನು.

" ಸರಿಯಪ್ಪ. ಮಂತ್ರಿ ಪದವಿಗಾಗಿ ಬರುವವರಿಗೆ ನೀನು ಮಾಡುವ ಪರೀಕ್ಷೆ ಹೇಗಿದೆಯೋ ಸುಮ್ಮನೆ ನೋಡುತ್ತಿರುತ್ತೇನೆ " ಎಂದು ಹೇಳಿ ಪ್ರತಾಪಸೇನನು ಪರೀಕ್ಷೆಯ ಸಮಯದಲ್ಲಿ ಮಗನ ಪಕ್ಕದಲ್ಲೇ ಕುಳಿತನು.

ಮಂತ್ರಿ ಪದವಿಯನ್ನು ಆಶಿಸಿ ಬಂದ ಪ್ರತಿಯೊಬ್ಬ ನೊಂದಿಗೂ ಪ್ರಸೇನನು " ಎರಡೈದುಗಳೆಷ್ಟಾಗುತ್ತೆ?"



ಎಸ್. ಆರ್. ಕಮಲ್



ಎಂದು ಕೇಳುತ್ತಿದ್ದನು. ಅವನು "ಹತ್ತು" ಎಂದು ಹೇಳಿದ ಕೂಡಲೇ ಹೊರಗೆ ಕಳುಹಿಸಿಬಿಡುತ್ತಿದ್ದನು. ಮಗನು ಮಾಡುವ ಪ್ರಶ್ನೆಯೊಳಗೆ ಏನೋ ಕೀಲಕ ವಿರಬೇಕೆಂದು ಪ್ರಸೇನನು ಭಾವಿಸಿಕೊಂಡಿದ್ದನು.

ಸತ್ತು ಹೋದ ಮಂತ್ರಿ ಬಾದರಾಯಣನಿಗೆ ಸೌಗಂಧರಾಯಣನೆಂಬ ಮಗನಿದ್ದನು. ತಿಳುವಳಿಕೆಯಲ್ಲಿ ಅವನು ತಂದೆಯನ್ನು ಮೀರಿಸುವವನು. ಪ್ರಸೇನನು ಮೂರ್ಖನೆಂದು ಅವನಿಗೆ ಗೊತ್ತಿತ್ತು. ಅವನು ಎಂತಹ ಪ್ರಶ್ನೆ ಮಾಡುವನೆಂದು ತಿಳಿಯಲು ಮೊದಲು ತನ್ನ ಸೇವಕನನ್ನು ಕಳುಹಿಸಿಕೊಟ್ಟನು.

ಆದರಿಂದ ಅವನಿಗೆ ಪ್ರಶ್ನೆ ಏನೆಂಬುದು ಗೊತ್ತಾಯಿತು. ಆಮೇಲೆ ಸೌಗಂಧರಾಯಣನು ಪ್ರಸೇನನ ಪ್ರಶ್ನೆಯನ್ನು ಕೇಳಿ, "ಎರಡು ಐದುಗಳು ಏಳಾಗುತ್ತದೆ ಪ್ರಭೂ !" ಎಂದು ಹೇಳಿದನು.

ಪ್ರಸೇನನು ಬಹಳ ಸಂತೋಷದಿಂದ, "ಹಾಗಾದರೆ ನೀನೇ ನನ್ನ ಮಂತ್ರಿ !" ಎಂದನು.

"ಮಹಾ ಪ್ರಭೂ, ತಮ್ಮ ಪ್ರಶ್ನೆ ಏನೆಂಬುದನ್ನು ನಾನು ಮುಂದಾಗಿ ತಿಳಿದುಕೊಂಡ ಕಾರಣದಿಂದಲೇ ಉತ್ತರ ಹೇಳಲು ಸಾಧ್ಯವಾಯಿತು. ಆದರೆ ಎರಡು ಐದುಗಳು ಹತ್ತು ಏತಕ್ಕೆ ಆಗುವುದಿಲ್ಲವೆಂಬುದನ್ನು ಹೇಳಲು ತಾವು ಒಬ್ಬರೇ ಸಮರ್ಥರೆಂದು ನನ್ನ ಅಭಿಪ್ರಾಯ" ಎಂದನು ಸೌಗಂಧರಾಯಣ.

ಕೂಡಲೇ ಪ್ರಸೇನನು ದಿಗಿಲು ಬಡಿದವನಾಗಿ "ಹಾಗಾದರೆ ಎರಡು ಐದುಗಳು ಹತ್ತು ಎಂದು ನಿನಗೂ ಗೊತ್ತಿರುವುದೆಂದಾಯಿತು. ಮಂತ್ರಿ ಪದವಿಗೆ ನೀನು ಕೂಡಾ ಅರ್ಹನಲ್ಲ !" ಎಂದು ಹೇಳಿ ಅವನನ್ನು ಕಳುಹಿಸಿಬಿಟ್ಟನು.

ಇವನ್ನೆಲ್ಲ ನೋಡುತ್ತಿದ್ದ ಪ್ರತಾಪಸೇನನು ಕುಮಾರನೊಂದಿಗೆ, "ಈ ಪ್ರಶ್ನೆ ಹಾಕುವುದರಲ್ಲಿ ನಿನ್ನ ಉದ್ದೇಶ ಏನಪ್ಪಾ ?" ಎಂದು ಕೇಳಿದನು.

"ಅಪ್ಪಾ, ಬಾದರಾಯಣ ಮಂತ್ರಿಯವರು ಬಹಳ ತಿಳುವಳಿಕೆಯುಳ್ಳವರು. ಗುಣಾಕಾರ ಬಲ್ಲವರೆಲ್ಲ ದೊಡ್ಡ ಮಂತ್ರಿಯಾಗಲಾರರೆಂದು ಆಗಾಗ ಹೇಳುತ್ತಾ ಇರುತ್ತಾರೆ. ಅವರಿಗೆ ಮಗ್ಗಿ ಲೆಕ್ಕ ಸರಿಯಾಗಿ ಬಾರದೆಂದು ಕಾಣುತ್ತದೆ. ಮತ್ತೆ ಹಾಗಿರುವ ಮಂತ್ರಿಯೇ ನನಗೆ ಬೇಕು ಎಂದು ಹಾಗೆ ಪ್ರಶ್ನೆ ಮಾಡಿದೆ" ಎಂದನು ಪ್ರಸೇನ.

ಕುಮಾರನ ತಿಳುವಳಿಕೆ ಎಂತಹುದೆಂದು ಪ್ರತಾಪಸೇನನಿಗೆ ಅರ್ಥವಾಯಿತು. ಅವನು ಆ ಕೂಡಲೇ ಸೌಗಂಧರಾಯಣನನ್ನು ಕರೆಯಿಸಿ, ಅವನ ತಿಳುವಳಿಕೆಗಳನ್ನು ಸ್ವತಃ ಪರೀಕ್ಷಿಸಿ, ಪ್ರಸೇನ ಕುಮಾರನಿಗೆ ಮಂತ್ರಿಯಾಗಿರುವಂತೆ ನಿಯಮಿಸಿದನು. ಆಮೇಲೆ ಎಲ್ಲವೂ ಚೆನ್ನಾಗಿಯೇ ನಡೆಯತೊಡಗಿತು.





# ಕೃತಘ್ನನ್

ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಬ್ರಹ್ಮದತ್ತ ರಾಜನಿಗೆ ಒಬ್ಬ ಮಗನಿದ್ದನು. ಅವನು ಚಿಕ್ಕತನದಿಂದಲೂ ಬಹಳ ದುಷ್ಟ, ಕ್ರೂರ. ಯಾವ ಕಾರಣವೂ ಇಲ್ಲದೆ ದಾರಿಹೋಕರನ್ನು ಭಟರಿಂದ ಹಿಡಿಸಿ ಒದೆಸಿ ನಾನಾ ಹಿಂಸೆ ಪಡಿಸಿ ಆನಂದ ಪಡುವವನು. ವೃದ್ಧರ ಮೇಲೂ, ವಿದ್ವಾಂಸರ ಮೇಲೂ ರವಷ್ಟು ಕೂಡಾ ಗೌರವಭಾವವಿಲ್ಲದೆ ಗೇಲಿಮಾಡಿ ಮಾತಾಡಿಸಿ ಅವಮಾನಪಡಿಸುತ್ತಾನೆ. ಈ ಬಗೆಯ ಕಾರಣಗಳಿಂದ ಅವನು ಯುವರಾಜನೆಂಬ ಗೌರವಭಾವ ಯಾರಿಗೂ ಇರಲಿಲ್ಲ. ಎಲ್ಲರಿಗೂ ಅವನೆಂದರೆ ಕೆಟ್ಟ ಹೆದರಿಕೆ, ಅಸಹ್ಯ. ಆದರೆ ಏನು ಮಾಡಲೂ ಸಾಧ್ಯವಿಲ್ಲದೆ ತಮ್ಮೊಳಗೇ ಶಾಪ ಹಾಕಿಕೊಂಡಿರುವರು.

ಅವನು ಇಪ್ಪತ್ತು ವರ್ಷ ಬೆಳೆದ ವಯಸ್ಸಿನ ಕೋಣನಾಗಿರುವಾಗ, ಕೆಲವರು ಅವನಂತಹ ಸ್ನೇಹಿತರೊಂದಿಗೆ ಕೂಡಿ ಸ್ನಾನಕ್ಕಾಗಿ ನದಿಗೆ ಹೋದನು. ಅವನಿಗೆ ಈಜಲಿಕ್ಕೆ ಗೊತ್ತಿರಲಿಲ್ಲ. ಆದುದರಿಂದ ದೊಡ್ಡ ಈಜುಗಾರರಾದ ಕೆಲಮಂದಿ ನೌಕರರನ್ನು ತನ್ನೊಂದಿಗೆ ಕರೆದುಕೊಂಡು ಹೋದನು.

ಅವರು ಅವನನ್ನು ಅವನ ಇಷ್ಟದಂತೆ ಹಿಡಿದು ನೀರಿನಲ್ಲಿ ತೇಲಿಸುತ್ತಾ ಜಲಕ್ರೀಡೆಯಾಡಿಸಬೇಕು. ಯುವರಾಜನೂ ಅವನ ಸ್ನೇಹಿತರೂ ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ, ಇದ್ದಕ್ಕಿದ್ದ ಹಾಗೆ ಆಕಾಶವನ್ನು ಮೇಘಗಳು ಮುಚ್ಚಿದುವು. ಮಿಂಚು ಗುಡುಗುಗಳೊಂದಿಗೆ ಜಡಿಮಳೆ ಪ್ರಾರಂಭವಾಯಿತು. ಅದನ್ನು ನೋಡಿ ಯುವರಾಜನಿಗೆ ಹಿಡಿಸಲಾಗದಷ್ಟು ಉತ್ಸಾಹ ಬಂತು. ಆನಂದದಿಂದ ಚಪ್ಪಾಳೆ ತಟ್ಟಿ, ನೌಕರರೊಂದಿಗೆ, " ಆಹಾ ! ಇಂಥಾ ಸಮಯದಲ್ಲಿ ನದಿಯ ನಡುವಿಗೆ ಹೋಗಿ ಸ್ನಾನ ಮಾಡುವುದು ಬಹಳ ಗಮ್ಮತ್ತಾಗಿರುತ್ತೆ. ಅಲ್ಲಿಗೆ ಈಜುತ್ತಾ ನನ್ನನ್ನು ಜಾಗರೂಕತೆಯಿಂದ ಹಿಡಿದು ಎತ್ತಿಕೊಂಡು ಹೋಗಿರಿ " ಎಂದನು.

ನೌಕರರು ಈ ಆಜ್ಞೆಯನ್ನು ಕೇಳಿ, ನದಿಯೊಳಗೆ ಇಳಿದು ಯುವರಾಜನನ್ನು ನದಿಯ ಮಧ್ಯಭಾಗಕ್ಕೆ ತೆಗೆದುಕೊಂಡು ಹೋದರು. ಅವನ ಸ್ನೇಹಿತರು ಮಾತ್ರ ತೀರದ ಬದಿಯ ನೀರಿನಲ್ಲೇ ಇದ್ದುಬಿಟ್ಟರು. ಮಳೆ ಜೋರುಜೋರಾಗುತ್ತಾ ಹೋಯಿತು. ಅದಕ್ಕೆ ಜೋಡು ತುಸು ದೂರದಲ್ಲಿ ಏನಿರುವುದೆಂಬುದು



ಕಾಣದಂತೆ ಮಳೆಯ ಜಲಧಾರೆಗಳು ಬಲೆಯಂತೆ ಮುತ್ತಿ ಮುಸುಕಿಕೊಂಡುವು. ನದಿಗೆ ಹೋದವರು ಏನಾದರೆಂದು ಯಾರಿಗೂ ಕಾಣಿಸುತ್ತಿದ್ದಿಲ್ಲ.

ನೌಕರರಿಗೆ ದುಷ್ಟನಾದ ಯುವರಾಜನ ಮೇಲೆ ಹಗೆ ತೀರಿಸಿಕೊಳ್ಳಲು ಇದೊಂದು ಒಳ್ಳೆಯ ಸಮಯ ವೆನಿಸಿತು. ಅವರು ಅವನನ್ನು ನದಿಯ ಮಧ್ಯದಲ್ಲಿ ಕೈಬಿಟ್ಟು ತಮ್ಮ ಪಾಡಿಗೆ ವೇಗವಾಗಿ ಈಜಿ ತೀರಕ್ಕೆ ಹಿಂದಿರುಗಿ ಬಿಟ್ಟರು.

"ಯುವರಾಜರು ಎಲ್ಲಿ?" ಎಂದು ಅವನ ಸ್ನೇಹಿತರು ನೌಕರರನ್ನು ಕೇಳಿದರು.

"ಅವರು ನಮ್ಮ ಪಟ್ಟು ತಪ್ಪಿಸಿ, ಈಜಲು ಬಂತು ಎನ್ನುತ್ತ ಈಜಿಕೊಂಡು ಹೋದರು. ಬಹುಶಃ ಬೇರೆಲ್ಲಿಯೋ ತೀರ ಸೇರಿರಬೇಕು. ಸ್ವಲ್ಪ ಹೊತ್ತಿಗೆ ಬಂದಾರು. ಅಥವಾ ಮನೆಗೆ ಹೋಗಿರಬೇಕು" ಎಂದು ನೌಕರರು ಉತ್ತರ ಕೊಟ್ಟರು.

ಎಲ್ಲರೂ ರಾಜಭವನಕ್ಕೆ ಹಿಂದಿರುಗಿದರು. ರಾಜನು ಮಗನನ್ನು ಕುರಿತು ಕೇಳಲು, ನೌಕರರು ಅವನ ಸ್ನೇಹಿತರಿಗೆ ಕೊಟ್ಟ ಉತ್ತರವನ್ನೇ ಕೊಟ್ಟರು. ಕೂಡಲೇ ರಾಜನು ಸೈನಿಕರನ್ನು ಕರೆದು ನದಿಯ ಪ್ರಾಂತದಲ್ಲೆಲ್ಲಾ ಯುವರಾಜನನ್ನು ಹುಡುಕಲು ಹೇಳಿದನು. ಅವರು ಮಧ್ಯ ರಾತ್ರಿಯವರೆಗೂ ಎಲ್ಲೆಲ್ಲೋ ಹುಡುಕಿ, ಯುವರಾಜನ ಜಾಡು ತಿಳಿಯ ಲಿಲ್ಲವೆಂದು ರಾಜನೊಂದಿಗೆ ಹೇಳಿದರು. ಸಾಯು ತ್ತಿದ್ದರೆ ಶವವಾದರೂ ಸಿಗಬೇಕಿತ್ತು.

ಆದರೆ ಯುವರಾಜನು ಸಾಯಲಿಲ್ಲ. ಪ್ರವಾಹದ ವೇಗದೊಂದಿಗೆ ಅವನು ಮುಳುಗುತ್ತಾ, ತೇಲುತ್ತಾ ಹೊಡೆದುಕೊಂಡು ಹೋಗುವಾಗ, ನದಿಯಲ್ಲಿ ತೇಲುತ್ತಾ ಬಂದ ಮರದ ತುಂಡೊಂದು ಅವನ ಕೈಗೆ ಸಿಕ್ಕಿತು. ಅದೃಷ್ಟವಶಾತ್ ಸಿಕ್ಕಿದ ಅದನ್ನು ಗಟ್ಟಿಯಾಗಿ ಹಿಡಿದು, ಜೀವ ಹೋಗದಂತೆ ಉಸಿರು ಬಿಡುತ್ತ ಆ ತುಂಡು ಹೋದ ಹಾಗೆಯೇ ಹೋದನು.

ಆ ಮರದ ತುಂಡಿನ ಮೇಲೆ ಈ ಮೊದಲೇ ಮತ್ತೆ ಮೂರು ಪ್ರಾಣಿಗಳೂ ಜೀವ ಹಿಡಿದು ನಡುಗಿಕೊಂಡು ಇದ್ದುವು. ಅವು ಯಾವುವೆಂದರೆ, ಒಂದು ಹಾವು, ಒಂದು ಇಲಿ ಮತ್ತು ಒಂದು ಗಿಳಿ.

ಅಂತಹ ತುಫಾನಿನ ಹೋರ್ದನಿಯಲ್ಲಿ ಯುವ ರಾಜನು ಮಧ್ಯೆ ಮಧ್ಯೆ ಗಟ್ಟಿಯಾಗಿ, "ರಕ್ಷಿಸಿರೋ! ರಕ್ಷಿಸಿರೋ!" ಎಂದು ಕೂಗು ಹಾಕುತ್ತಿದ್ದನು.

ಈ ವಿಧವಾಗಿ ಮರದ ತುಂಡಿನೊಂದಿಗೆ ಯುವ ರಾಜನು ನದಿಯಲ್ಲಿ ಹೊಡೆದುಕೊಂಡು ಹೋಗು ತ್ತಿರುವಾಗ, ಸೂರ್ಯಾಸ್ತವಾಗುತ್ತಾ ಬಂತು. ಆ ಸಮಯದಲ್ಲಿ ನದಿ ಒಂದು ಅರಣ್ಯದ ಮಧ್ಯದಲ್ಲಿ ಪ್ರವಹಿಸಿಕೊಂಡಿತ್ತು. ಆ ಅರಣ್ಯದ ಒಂದು ಆಶ್ರಮ ದಲ್ಲಿ ಸಾಧುವಾಗಿ ಜನ್ಮಿಸಿದ ಬೋಧಿಸತ್ವನು ಯಾವಾಗಲೂ ತಪಸ್ಸು ಮಾಡಿಕೊಂಡು ಅಲ್ಲಿಯೇ ಇದ್ದನು. ಅವನಿಗೆ ಯುವರಾಜನ ದೀನಕಂಠದಿಂದ ಹೊರಡುವ ಆರ್ತನಾದದ ಕೂಗು ಕೇಳಿಸಿತು.



ಅವನು ದೃಢಕಾಯನೂ ಧೈರ್ಯಶಾಲಿಯೂ, ದಯಾಮಯನೂ ಆದುದರಿಂದ ತಟ್ಟನೆ ಎದ್ದು, ಅಷ್ಟು ದೊಡ್ಡ ತುಫಾನಿನ ನಡುವೆ ನದಿಗೆ ಇಳಿದು, ಈಜುತ್ತಾ ಹೋಗಿ, ಮರದ ತುಂಡನ್ನು ಹಿಡಿದು ತೀರಕ್ಕೆ ಎಳೆದುಕೊಂಡು ಬಂದನು. ಅದರೊಂದಿಗೆ ಯುವರಾಜನೂ ತೀರ ಸೇರಿದನು. ಹಾವು, ಇಲಿ, ಗಿಳಿಗಳೂ ತೀರಕ್ಕೆ ಸೇರಿದುವು.

ಸಾಧು ಬೋಧಿಸತ್ವನು, ಯುವರಾಜನನ್ನೂ, ಉಳಿದ ಪ್ರಾಣಿಗಳನ್ನೂ ತನ್ನ ಆಶ್ರಮಕ್ಕೆ ಕರೆದು ಕೊಂಡು ಹೋಗಿ, ಅಗ್ಗಿಷ್ಟಿಕೆ ಉರಿಸಿ ಅವರೆಲ್ಲರ ಚಳಿಕಾಯಿಸಿದನು. ತಕ್ಕ ಆಹಾರ ಪದಾರ್ಥಗಳನ್ನೂ ನೀಡಿದನು. ಮೊದಲು ಅಲ್ಪಜೀವಿಗಳಾದ ಹಾವು, ಇಲಿ, ಗಿಳಿಗಳಿಗೆ ಆಹಾರಕೊಟ್ಟು, ಆಮೇಲೆ ಯುವ ರಾಜನ ಆರೈಕೆ ತೆಗೆದುಕೊಂಡನು. ಯುವರಾಜನ ಭೋಜನವಾದ ಮೇಲೆ ಮಲಗಲು ಬೆಚ್ಚಗಿರುವಂತಹ ಹಾಸಿಗೆಯ ಏರ್ಪಾಡು ಕೂಡಾ ಮಾಡಿಕೊಟ್ಟನು.

ಈ ವಿಧವಾಗಿ ಅವರೆಲ್ಲ ಎರಡು ದಿನಗಳವರಗೆ ಬೋಧಿಸತ್ವನ ಅತಿಥಿಗಳಾಗಿ ಉಪಚಾರ ಪಡೆದರು. ಆಗಷ್ಟೇ ಅವರಿಗೆ ಸ್ವತಂತ್ರವಾಗಿ ಹೋಗುವಂತೆ ಬಲ ಬಂದಿತು. ಯುವರಾಜನೂ, ಮೂರು ಪ್ರಾಣಿ ಗಳೂ ತಮ್ಮ ತಮ್ಮ ದಾರಿ ಹಿಡಿದು ಹೊರಡಲು ಸಿದ್ಧರಾದರು.

ಗಿಳಿ ಬೋಧಿಸತ್ವನೊಂದಿಗೆ, "ಅಯ್ಯಾ, ತಾವು ನನ್ನ ಪ್ರಾಣದಾತರು. ನದಿಯ ಪಕ್ಕದಲ್ಲಿರುವ ಮರದ ಪೊಟರೆ ನನ್ನ ನಿವಾಸಸ್ಥಾನ. ತುಫಾನಿನ ಪೆಟ್ಟಿಗೆ ಆ ಮರ ನದಿಗೆ ಮಗುಚಿ ಬಿತ್ತು, ನನಗೂ ಪೆಟ್ಟಾಗಿ ಹಾರಲಾರದೆ ಹೋದೆನು. ನನಗೆ ಹಿಮಾ ಲಯದಲ್ಲಿ ಬಹಳ ಮಂದಿ ಮಿತ್ರರಿದ್ದಾರೆ. ನಿಮಗೆ ಎಂದಾದರೂ ಆಗತ್ಯಬಿದ್ದರೆ ನದಿಯ ಹತ್ತಿರವಿರುವ ಪರ್ವತದ ಬುಡದಲ್ಲಿ ಬಂದು ನಿಂತು ನನ್ನನ್ನು ಕರೆಯಿರಿ. ನನ್ನ ಮಿತ್ರರಿಂದ ನಿಮಗೆ ಅಪೂರ್ವವಾದ ಧಾನ್ಯಗಳನ್ನೂ, ಫಲಗಳನ್ನೂ ತರಿಸಿಕೊಡುತ್ತೇನೆ" ಎಂದಿತು.

"ನಿನ್ನ ವಾಗ್ದಾನವನ್ನು ನೆನಪಿಟ್ಟುಕೊಳ್ಳುತ್ತೇನೆ" ಎಂದನು ಬೋಧಿಸತ್ವ.

ಹಾವು ಬೋಧಿಸತ್ವನೊಂದಿಗೆ, "ನಾನು ಪೂರ್ವ ಜನ್ಮದಲ್ಲಿ ಒಬ್ಬ ವರ್ತಕನಾಗಿದ್ದೆ. ಆಗ ಕೆಲವು ಕೋಟಿ ಬಂಗಾರದ ನಾಣ್ಯಗಳನ್ನು ನದಿಯ ತೀರದಲ್ಲಿ ಒಂದು ಕಡೆ ಹುಗಿದಿಟ್ಟಿದ್ದೇನೆ. ಆ ಬಂಗಾರದ ಮೋಹದಿಂದಲೇ ಈ ಜನ್ಮದಲ್ಲಿ ಹೀಗೆ ಹಾವಾಗಿ ಹುಟ್ಟಿದ್ದೇನೆ. ನನ್ನ ಜೀವಿತವು ಆ ನಿಧಿಯನ್ನು ನೋಡುವುದರಲ್ಲೇ ಕಳೆಯುತ್ತಿದೆ. ಆ ಬಂಗಾರ ವನ್ನೆಲ್ಲ ತಾವು ಏನಾದರೂ ಪ್ರಯೋಜನಕರವಾದ ಕಾರ್ಯಗಳಿಗೆ ಉಪಯೋಗಿಸಿದಿರಾದರೆ ನನಗೆ ಮುಕ್ತಿ" ಎಂದಿತು.

"ಹಾಗೆಯೇ ಆಗಲಿ, ಒಂದು ದಿನ ಬರುತ್ತೇನೆ" ಎಂದು ಹಾವಿಗೆ ಹೇಳಿದನು ಬೋಧಿಸತ್ವ.

ಆಮೇಲೆ ಇಲಿ ಕೂಡಾ ತನ್ನ ಹತ್ತಿರವಿರುವ ನಿಧಿಯನ್ನು ಕುರಿತು ಹೇಳಿಕೊಂಡಿತು. ಬೋಧಿಸತ್ವನು ಆ ಮೂರನ್ನೂ ಇನ್ನೊಮ್ಮೆ ಸಂಧಿಸುವೆನೆಂದು ಹೇಳಿ ಅಪ್ಪಣೆಕೊಟ್ಟು ಕಳುಹಿಸಿದನು.

ಯುವರಾಜನು ಬೋಧಿಸತ್ವನೊಂದಿಗೆ, "ಎಂದೋ ಒಂದು ದಿನ ನನ್ನ ತಂದೆ ಸತ್ತು, ಕಾಶೀರಾಜ್ಯಕ್ಕೆ ನಾನೇ ರಾಜನಾಗುತ್ತೇನೆ. ಆಗ ನೀವು ರಾಜಧಾನೀ ನಗರಕ್ಕೆ ಬನ್ನಿ. ತಮ್ಮನ್ನು ಸಕಲ ಮರ್ಯಾದೆಗಳಿಂದಲೂ ಆಹ್ವಾನಿಸುತ್ತೇನೆ. ನಿಮಗೂ ರಾಜಮರ್ಯಾದೆ ಅಂದರೇನೆಂಬುದು ಗೊತ್ತಿದ್ದೀತು" ಎಂದು ಹೇಳಿ ಹೊರಟುಹೋದನು.

ಕೆಲವು ವರ್ಷಗಳ ಮೇಲೆ ಬೋಧಿಸತ್ವನು ಕಾಶಿಗೆ ಹೋದನು, ಆಗ ಬ್ರಹ್ಮದತ್ತ ರಾಜನು ತೀರಿ ಹೋಗಿ, ಯುವರಾಜನು ಸಿಂಹಾಸನಕ್ಕೆ ಬಂದು, ಅವನ ಅಧಿಕಾರ ನಡೆಯುತ್ತಿತ್ತು.

ಬೋಧಿಸತ್ವನು ನಗರವನ್ನು ಸೇರಿ ರಾಜಬೀದಿಯಲ್ಲಿ ನಡೆಯುತ್ತಿದ್ದಾಗ, ಆನೆಯ ಮೇಲೆ ಅಂಬಾರಿಯಲ್ಲಿ ಸಾಗುತ್ತಿದ್ದ ರಾಜನು ಬೋಧಿಸತ್ವನನ್ನು ನೋಡಿದಕೂಡಲೇ, ತನ್ನ ಭಟರೊಂದಿಗೆ, "ಆ ಸಾಧುವನ್ನು ಕೂಡಲೇ ಹಿಡಿದು ಕಂಬಕ್ಕೆ ಕಟ್ಟಿ ಕೊರಡೆಗಳಿಂದ ಹೊಡೆದು ಬೀಳಿಸಿರಿ. ಆ ಕೆಲಸ ಮುಗಿದಮೇಲೆ ವಧ್ಯಸ್ಥಾನಕ್ಕೆ ಒಯ್ದು ತಲೆ ಕಡಿಯಿರಿ. ಇವನಿಗಿರುವ ಪೊಗರು ಸಾಮಾನ್ಯದ್ದಲ್ಲ. ನಾನು ಯುವರಾಜನಾಗಿದ್ದಾಗ ನನ್ನನ್ನು ಅಲಕ್ಷ್ಯ ಮಾಡಿ ಹಾವು ಇಲಿ, ಗಿಳಿಗಳಿಗೆ ಉಪಚಾರಮಾಡಿದ. ಅವುಗಳಿಂದ ಸಿಕ್ಕಿದ ಬಂಗಾರವಷ್ಟನ್ನೂ ಮರ್ಯಾದೆಯಿಂದ ನನಗೆ ತಂದೊಪ್ಪಿಸುವುದನ್ನು ಬಿಟ್ಟು, ಯಾರು ಯಾರಿಗೋ ಹಂಚಿದ. ರಾಜದ್ರೋಹಿ !" ಎಂದನು.

ಹೀಗೆ ರಾಜಾಜ್ಞೆಯಾಗುತ್ತಲೇ ಬೋಧಿಸತ್ವನನ್ನು ಭಟರು ಹಿಡಿದು ಕಟ್ಟಿ ಹೊಡೆಯಲು ತೊಡಗಿದರು. ಅದನ್ನು ನೋಡಿದ ಪ್ರಜೆಗಳು ತಮಗೆ ತುಂಬಾ ಪ್ರಿಯದರ್ಶನನಾಗಿರುವ ಬೋಧಿಸತ್ವನ ಬಳಿಗೆ ಓಡಿ ಬಂದು, "ಸ್ವಾಮಿ, ನೀವು ಈ ರಾಜನಿಗೆ ಏನು ಅಪಕಾರ ಮಾಡಿದಿರಿ ?" ಎಂದು ಕೇಳಿದ್ದರು.



"ಆ ದಿನ ಇವನನ್ನು ಪ್ರಾಣಾಪಾಯದಿಂದ ಉಳಿಸಿ ಈಗ ರಾಜನಾಗುವಂತೆ ಮಾಡಿದುದೇ ಅವನಿಗೆ ಅಪಕಾರವಾಗಿ ತೋರುತ್ತದೆ" ಎಂದು ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ನಿಜಕ್ಕೂ ಕಾಶೀರಾಜ್ಯದ ಪ್ರಜೆಗಳು ಈ ಹೊಸ ರಾಜನಿಂದ ತುಂಬಾ ಹಿಂಸೆಗಳನ್ನು ಅನುಭವಿಸುತ್ತಿದ್ದರು. ಅನೇಕ ಬಗೆಯ ಅವಮಾನಗಳಿಗೆ ಗುರಿಯಾಗುತ್ತಿದ್ದರು. ಈಗ ಅವನು ಉಪಕಾರಿಯಾದ ಬೋಧಿಸತ್ವನನ್ನು ಹಿಂಸಿಸುವುದನ್ನು ನೋಡಿದ ಕೂಡಲೇ ಅವರ ದ್ವೇಷವು ಒಮ್ಮೆಗೇ ಭಗ್ಗೆಂದಿತು. ಅವರು ಕೈಗೆ ಸಿಕ್ಕಿದ ಆಯುಧಗಳನ್ನು ತೆಗೆದುಕೊಂಡು ಭಟರನ್ನು ಹೊಡೆದೋಡಿಸಿ, ಬೋಧಿಸತ್ವನನ್ನು ಬಂಧಮುಕ್ತ ಮಾಡಿದರು. ದುಷ್ಟನಾದ ರಾಜನು ಪ್ರಜೆಗಳ ಕೋಪವನ್ನು ನೋಡಿ ಅಲ್ಲಿಂದ ಓಡಿ ಹೋಗಲು ಪ್ರಯತ್ನಿಸಿದನು. ಆದರೆ ಪ್ರಜೆಗಳು ಅವನನ್ನು ಓಡಿಸಿಕೊಂಡು ಹೋಗಿ ಆನೆಯ ಮೇಲಿನಿಂದ ಕೆಳಕ್ಕೆ ಬೀಳಿಸಿ ಕೊಂದು ಹಾಕಿಬಿಟ್ಟರು.

ಅನಂತರ ಪ್ರಜೆಗಳ ಕೋರಿಕೆಯ ಮೇಲೆ ಬೋಧಿಸತ್ವನೇ ರಾಜನಾಗಿ, ಧರ್ಮವು ತಪ್ಪದಂತೆ ರಾಜ್ಯ ಪಾಲನೆಯನ್ನು ಮಾಡತೊಡಗಿದನು. ಅವನು ಹಾವನ್ನೂ, ಇಲಿಯನ್ನೂ, ಗಿಳಿಯನ್ನೂ ಮರೆಯಲಿಲ್ಲ. ಹಾವು ಕೊಟ್ಟ ನಿಧಿನಿಕ್ಷೇಪಗಳನ್ನು ಅವನು ಯಾರು ಯಾರಿಗೋ ಕೊಟ್ಟನೆಂದು ರಾಜನು ಊಹಿಸಿಕೊಂಡನೇ ಹೊರತು, ನಿಜವಾಗಿ ಬೋಧಿಸತ್ವನು ಈಗ ತಾನೇ ಅವುಗಳ ಬಳಿಗೆ ಹೋಗಿ ಕುಶಲ ವಿಚಾರಿಸಿದನು. ಅವು ತಮ್ಮ ನಿಧಿ ನಿಕ್ಷೇಪಗಳನ್ನು ಬೋಧಿಸತ್ವನಿಗೆ ಕೊಟ್ಟು, ಸ್ವೀಕರಿಸಬೇಕೆಂದು ಬೇಡಿಕೊಂಡುವು.

ಬೋಧಿಸತ್ವನು ಅವುಗಳ ಕೋರಿಕೆಯನ್ನು ಮನ್ನಿಸಿ ಧನದೊಂದಿಗೆ ಅವುಗಳನ್ನೂ ರಾಜಧಾನಿಗೆ ಕರೆದು ತಂದನು, ಗಿಳಿಯನ್ನೂ ನೋಡಿ, ರಾಜಧಾನಿಗೆ ಬರಬೇಕೆಂದು ಆಹ್ವಾನಿಸಿದನು.

ಅವನು ಪ್ರಜೆಗಳ ಕ್ಷೇಮ ಕಾರ್ಯಕ್ಕಾಗಿ ನಿಧಿಯನ್ನು ಖರ್ಚು ಮಾಡುತ್ತ, ಹಾವಿನ ವಾಸಕ್ಕಾಗಿ ರಾಜಭವನದ ಹತ್ತಿರ ಬಂಗಾರದ ಸುರಂಗವೊಂದನ್ನು ಏರ್ಪಡಿಸಿಕೊಟ್ಟನು.

ಇಲಿಯ ವಾಸಕ್ಕಾಗಿ, ಮಾಣಿಕ್ಯಗಳನ್ನು ಹೊದೆಸಿದ ಒಂದು ಬಿಲವನ್ನೂ, ಗಿಳಿಗೆ ಬಂಗಾರದ ಪಂಜರವನ್ನೂ ತಯಾರು ಮಾಡಿಸಿದನು.

ಈ ವಿಧವಾಗಿ ಕೃತಘ್ನನೂ ದುಷ್ಟನೂ ಆದ ರಾಜನು ಹೋಗಿ, ಧರ್ಮ ಸ್ವರೂಪನಾದ ಬೋಧಿಸತ್ವನು ರಾಜನಾದುದರಿಂದ, ಪ್ರಜೆಗಳು ಬಹಳ ಕಾಲ ಯಾವ ಕಷ್ಟನಷ್ಟಗಳಿಗೂ ಗುರಿಯಾಗದೆ ಸುಖವಾಗಿದ್ದರು.





# ಬಂಗಾರದ ಗುಡಾಣ

ಹಲವಾರು ವರ್ಷಗಳ ಹಿಂದೆ ಅರ್ಮೀನಿಯಾ ದೇಶದ ಒಂದು ಗ್ರಾಮದಲ್ಲಿ ಬಡವನಾದ ರೈತನೊಬ್ಬನಿದ್ದನು. ಅವನಿಗಿರುವ ಎರಡೇ ಎಕರೆ ಹೊಲವು ಅಷ್ಟೇನೂ ಸಾರವಂತವಾಗಿರಲಿಲ್ಲ. ಆ ರೈತನಿಗೆ ಹೆಂಡತಿಯೂ ಒಬ್ಬ ಮಗನೂ ಇದ್ದರು. ಇವರು ಮೂವರೂ ಸೇರಿ ಎಷ್ಟು ಕಷ್ಟಪಟ್ಟರೂ ಅವರಿಗೆ ಹೊಲದಿಂದ ಬರುವ ಬೆಳೆ ಹೊಟ್ಟೆ ತುಂಬ ತಿನ್ನುವಷ್ಟು ಸಾಕಾಗುವುದಿಲ್ಲ. ಆ ಕಾರಣದಿಂದ ಅವರು ಆಗಾಗ ಉಪವಾಸವಿರಬೇಕಾಗಿ ಬರುತ್ತಿತ್ತು. ದುರಾಶೆಯುಳ್ಳವರಲ್ಲವಾದುದರಿಂದ ಅದೂ ಅಭ್ಯಾಸವಾಗಿ ಹೋಯಿತು.

ರೈತನು ಈ ದರಿದ್ರ ಪರಿಸ್ಥಿತಿಯನ್ನು ಕುರಿತು ಆಲೋಚಿಸುತ್ತ ತನ್ನ ಈ ನಿಸ್ಸಾರವಾದ ನೆಲದಲ್ಲಿ ಎಂದೆಂದಿಗೂ ಇದೇ ಗತಿಯಾದುದರಿಂದ, ಒಳ್ಳೆಯ ಭವಿಷ್ಯತ್ತು ಬರುವಂತಿಲ್ಲ. ಆದುದರಿಂದ ಈ ಹೊಲಗಳನ್ನು ಮಾರಿ ಬೇರೊಂದು ಪ್ರಾಂತಕ್ಕೆ ಹೋಗಿ ಒಳ್ಳೆಯ ನೆಲ ಒಂದೆಕರೆ ಸಿಕ್ಕಿದರೂ ಸಾಕು, ಕೊಂಡುಕೊಳ್ಳಬೇಕು ಎಂದುಕೊಂಡು, ತನ್ನ ಪಕ್ಕದಲ್ಲಿರುವ ಇನ್ನೊಬ್ಬ ರೈತನಿಗೆ ತನ್ನ ಹೊಲಗಳನ್ನು ಮಾರಿಬಿಟ್ಟನು. ಇವನ ಹೊಲಗಳನ್ನು ಕೊಂಡುಕೊಂಡ ರೈತನೂ ಅಷ್ಟೇನೂ ಸ್ಥಿತಿವಂತನಲ್ಲ. ಬಹಳ ಶ್ರಮಪಟ್ಟು ಕೂಡಿಸಿಟ್ಟ ಹಣದಿಂದ ಆ ಹೊಲಗಳನ್ನು ಕೊಂಡುಕೊಂಡಿದ್ದನು.

ಒಂದು ದಿನ ಆ ರೈತನು ತಾನು ಕೊಂಡುಕೊಂಡ ಹೊಲಗಳನ್ನು ಉಳಲು ತೊಡಗಿದನು. ಹಠಾತ್ತಾಗಿ ನೇಗಿಲಿನ ಮೊನೆಗೆ ಏನೋ ತಗಲಿ ಖಂಗನೆ ಶಬ್ದವಾಯಿತು. ರೈತನು ಅಲ್ಲಿ ಅಗೆದು ನೋಡಲು, ಚಿಕ್ಕದೊಂದು ಪಾತ್ರದಲ್ಲಿ ತುಂಬಾ ಬಂಗಾರದ ನಾಣ್ಯಗಳಿರುವುದನ್ನು ನೋಡಿದನು.

ನೀತಿವಂತನಾಗಿದ್ದುದರಿಂದ ಕೂಡಲೇ ಆ ಪಾತ್ರವನ್ನೆತ್ತಿಕೊಂಡು, ತನಗೆ ಹೊಲಮಾರಿದ ಬಡ ರೈತನ ಬಳಿಗೆ ಬಂದು, "ನೀನು ನನಗೆ ಮಾರಿದ ಹೊಲದಲ್ಲಿ ಈ ಬಂಗಾರದ ನಾಣ್ಯ ತುಂಬಿದ ಪಾತ್ರ ಸಿಕ್ಕಿತು. ನಾನು ನಿನ್ನ ಹೊಲವನ್ನು ಮಾತ್ರ ಕೊಂಡುಕೊಂಡೆನೇ ಹೊರತು ಅದರಲ್ಲಿರುವ ನಿಧಿ ನಿಕ್ಷೇಪಗಳನ್ನು ಕೊಂಡುಕೊಳ್ಳಲಿಲ್ಲವಷ್ಟೆ? ಆದುದರಿಂದ ಈ ಬಂಗಾರವೆಲ್ಲ ನಿನ್ನದೇ, ತಂದಿದ್ದೇನೆ. ತೆಗೆದುಕೋ" ಎಂದು ಹೇಳಿದನು.



ಅರ್ಮೀನಿಯಾ ಜಾನಪದ ಕಥೆ



ಅದಕ್ಕೆ ಹೊಲವನ್ನು ಮಾರಿದ ರೈತ, "ಅದು ಹೇಗೆ? ನಾನು ಮಾರಿದ ಮೇಲೆ ಹೊಲದ ಹಕ್ಕುದಾರನು ನೀನೇ. ಅದರ ಒಳಿತಿಗೂ ಕೆಡುಕಿಗೂ ನಿನ್ನದೇ ಬಾಧ್ಯತೆ. ನ್ಯಾಯವಾಗಿ ನನ್ನದಲ್ಲದ್ದನ್ನು ನಾನು ಹೇಗೆ ತೆಗೆದುಕೊಳ್ಳಲಿ?" ಎಂದನು ಹೊಲ ಮಾರಿದ ರೈತ.

"ನನ್ನಿಂದ ಅನ್ಯಾಯವನ್ನು ಮಾಡಿಸಿಬಿಡಬೇಡ. ಪಾಪದವರ ಸರಳ ಗುಣವನ್ನು ಆಧಾರ ಮಾಡಿಕೊಂಡು ಲಾಭ ಸಂಪಾದಿಸುವುದು ನನ್ನ ತತ್ವವಲ್ಲ. ನೀನು ಸ್ವಲ್ಪ ಆಳವಾಗಿ ಉತ್ತಿದ್ದರೆ ಇದು ನಿನಗೇ ಸಿಗುತ್ತಿತ್ತು. ಸುಮ್ಮನೆ ವಾದ ಬೆಳೆಸದೆ ಈ ಬಂಗಾರವನ್ನು ತೆಗೆದುಕೋ" ಎಂದನು ಹೊಲವನ್ನು ಕೊಂಡುಕೊಂಡ ರೈತ ತುಸು ಕೋಪದಿಂದ.

"ನಾನು ಮಾತ್ರ ಬೇರೆ ಬಗೆಯವನೆಂದು ತಿಳಿದೆಯಾ? ನನ್ನಿಂದ ಪಾಪಕಾರ್ಯ ಮಾಡಿಸುವೆಯಾ?" ಎಂದನು ಮಾರಿದವನು. ಇಬ್ಬರಿಗೂ ವಾದ ವಿವಾದ ಜೋರುಜೋರಾಗಿ ಹೊಡೆದಾಡುವವರೆಗೂ ಹೋದರು. ಅಷ್ಟರಲ್ಲಿ ಒಬ್ಬನು ಶಾಂತನಾಗಿ, "ಇದೆಲ್ಲ ಬೇಡ. ನ್ಯಾಯ ಹೇಳುವಂತೆ ನಮ್ಮ ಮಹಾರಾಜನನ್ನು ಕೇಳುವುದೇ ಚೆನ್ನಾಗಿರುತ್ತದೆ" ಎಂದನು. ಇಬ್ಬರೂ ರಾಜನ ಬಳಿಗೆ ಹೋದರು.

ರಾಜನು ಅವರಿಬ್ಬರ ಧರ್ಮಗುಣವನ್ನು ನೋಡಿ, ಎಲ್ಲಿಲ್ಲದ ಆಶ್ಚರ್ಯವನ್ನು ಅನುಭವಿಸಿದನು. ಅವನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, ಹೊಲವನ್ನು ಮಾರಿದ ರೈತನನ್ನು ನೋಡಿ "ನಿನಗೆ ಎಷ್ಟು ಮಂದಿ ಮಕ್ಕಳಿದ್ದಾರೆ?" ಎಂದು ಕೇಳಿದನು.

"ಅಯ್ಯಾ, ಒಬ್ಬನೇ ಒಬ್ಬ ಮಗ ನನಗೆ" ಎಂದನು ಹೊಲವನ್ನು ಮಾರಿದವನು.

ರಾಜನು ಇನ್ನೊಬ್ಬ ರೈತನ ಮುಖ ನೋಡಿದನು, "ಸ್ವಾಮಿ, ನನಗೆ ಒಬ್ಬಳೇ ಮಗಳು" ಎಂದನು ಹೊಲವನ್ನು ಕೊಂಡ ರೈತ.

"ಆಹಾ! ಏನದ್ಭುತ!" ಎಂದು ರಾಜನು ಮತ್ತೊಮ್ಮೆ ಆಶ್ಚರ್ಯದಲ್ಲಿ ಹಾರಿ, ಆ ಉಭಯ



ರೈತರನ್ನು ನೋಡಿ, "ಅವರಿಬ್ಬರಿಗೂ ಮದುವೆ ಮಾಡಿಬಿಡಿ. ತರುವಾಯ ಮದುವೆಯ ಕಾಣಿಕೆಯಾಗಿ ಆ ಬಂಗಾರವನ್ನು ಮದುಮಕ್ಕಳು ಸ್ವೀಕರಿಸಿಕೊಳ್ಳಲಿ. ಅರ್ಧ ವರಕಾಣಿಕೆ, ಉಳಿದರ್ಧ ಕನ್ಯಾಶುಲ್ಕ ಅಂದುಕೊಳ್ಳಿರಿ, ಸಮಸ್ಯೆ ತೀರಿತು " ಎಂದನು.

ಇಷ್ಟೊಂದು ಹಗುರಾಗಿ ಸಮಸ್ಯೆ ಪರಿಹಾರವಾಗಿ ಹೋದುದನ್ನು ನೋಡಿ ರೈತರಿಬ್ಬರೂ ಬಹಳ ಸಂತೋಷಪಟ್ಟರು.

ರೈತರು ತಮಗೆ ದೊರಕಿದ ಬಂಗಾರದಿಂದ ಸಾರವಂತವಾದ ಭೂಮಿಯನ್ನು ಕೊಂಡುಕೊಂಡು ಅದರಲ್ಲಿ ಒಳ್ಳೆಯ ಮನೆಯನ್ನು ಕೂಡ ಕಟ್ಟಿಕೊಂಡರು.

ಮಕ್ಕಳಿಬ್ಬರನ್ನೂ ಸೇರಿಸಿ ಮದುವೆ ಮಾಡಿದರು. ವಿವಾಹದ ಸಮಯದಲ್ಲಿ ಊರವರಿಗೂ, ಹೊರಗಿನ ಊರಿನವರಿಗೂ ಸಹಾ ಔತಣ ಮಾಡಿದರು.

ಹೀಗೆ ಆ ಎರಡು ಕುಟುಂಬಗಳೂ ಬಹಳ ಅನ್ಯೋನ್ಯವಾಗಿ ಜೀವಿಸುತ್ತ, ವ್ಯವಸಾಯ ಮಾಡಿಕೊಂಡು ಬರುತ್ತಿದ್ದರು. ಬೆಳೆಗಳು ಹುಲುಸಾಗಿ ಬಂದುದರಿಂದ ಬಹು ಬೇಗದಲ್ಲೇ ಅವರಿಬ್ಬರೂ ಐಶ್ವರ್ಯವಂತರಾದರು. ಹೊಲದಲ್ಲಿ ಬಂಗಾರದ ಪಾತ್ರ ಸಿಕ್ಕಿದ ಸ್ಥಳದಲ್ಲಿ ಅಕಸ್ಮಾತ್ತಾಗಿ ಒಂದು ಗುಲಾಬೀ ಗಿಡ ಮೊಳಕೆ ಎದ್ದು ಬೆಳೆಯಿತು.

ಅದರಲ್ಲಿ ಬಂಗಾರದಂತೆ ಹೊಳೆಯುವ ಹೂಗಳಾದುದನ್ನು ನೋಡಿ ಎಲ್ಲರೂ ಅದ್ಭುತ ಪಡುತ್ತಿದ್ದರು.

ಒಂದು ದಿನ ರಾಜನ ಮಗನು ಆ ಪ್ರಾಂತವಾಗಿ ಬೇಟೆಯಾಡಲು ಹೋಗುತ್ತ, ಆ ಗುಲಾಬಿ ಹೂಗಳನ್ನು ಕೊಯಿದುಕೊಂಡು ತನ್ನೊಂದಿಗೆ ಒಯ್ಯಲು ಆಸೆಪಟ್ಟನು. ಆ ಗುಲಾಬೀ ಗಿಡವಿರುವ ಹೊಲದ ಯಜಮಾನನನ್ನು ಕೇಳಬೇಕೆಂಬ ಆಲೋಚನೆ ಇಲ್ಲದೆ, ಅವನು ಕುದುರೆಯಿಂದ ಇಳಿದು ಒಂದು ಹೂಗೊಂಚಲನ್ನು ಹಿಡಿದು ಬಲವಾಗಿ ಎಳೆದನು. ಮರುಕ್ಷಣದಲ್ಲಿ ಆ ಗುಲಾಬಿಯ ಗಿಡವೇ ಭೂಮಿಯಿಂದ ಕಿತ್ತುಕೊಂಡು ಅವನ ತಲೆಯ ಮೇಲೆ ಹಾರಿ, ವೇಗವಾಗಿ ಆಕಾಶಕ್ಕೇರಿ ಮಾಯವಾಯಿತು.





ರಾಜನ ಮಗನಿಗೆ ಆಶ್ಚರ್ಯವೂ, ತಲೆಯ ಮೇಲೆ ಮಣ್ಣು ಬಿದ್ದುದರಿಂದ ಕೋಪವೂ ಉಂಟಾಯಿತು. ಅವನು ಕುದುರೆಯನ್ನೇರಿ ಸ್ವಲ್ಪ ದೂರ ಹೋಗಿ ತಲೆ ತಿರುವಿ ಹಿಂದೆ ನೋಡಿದನು. ಗುಲಾಬೀ ಗಿಡ ಹೂಗಳನ್ನು ಅರಳಿಸಿಕೊಂಡು ಯಥಾಸ್ಥಾನದಲ್ಲಿರುವುದು ಕಾಣಿಸಿತು. ಈ ವಿಚಿತ್ರವನ್ನು ನೋಡಿ ರಾಜನ ಮಗನಿಗೆ ದಿಗ್ಭ್ರಾಂತಿಯಾಯಿತು.

ಅವನು ಮತ್ತೊಂದು ಸಾರಿ ಆ ಗುಲಾಬಿಯ ಹತ್ತಿರ ಬಂದು, ಒಂದೇ ಒಂದು ಹೂವನ್ನು ಕೊಯಿದುಕೊಳ್ಳೋಣವೆಂದು ನೋಡಿದನು. ಆದರೆ ಅವನ ಕೈ ತಗಲಿದ್ದೇ ತಡ, ಗುಲಾಬೀ ಗಿಡ ಮತ್ತೆ ಆಕಾಶಕ್ಕೆ ಹಾರಿಹೋಯಿತು.

ರಾಜನ ಮಗನ ಬುದ್ಧಿಗೆ ಮಂಕು ಬಡಿಯಿತು. ಅವನು ಕುದುರೆಯನ್ನೇರಿ ಸ್ವಲ್ಪ ದೂರ ಹೋಗಿ ಮತ್ತೆ ಹಿಂದಿರುಗಿ ನೋಡಿದನು. ಗುಲಾಬೀ ಗಿಡ ಮತ್ತೆ ಅಲ್ಲೇ ಇರುವುದು ಕಾಣಿಸಿತು.

ಅವನು ಮೊಂಡು ಪಟ್ಟು ಹಿಡಿದು ಪುನಃ ಹಿಂದಿರುಗಿ ಬಂದು, ಹೇಗಾದರೂ ಒಂದು ಹೂವನ್ನು ಕೊಯ್ದುಕೊಳ್ಳಲೇ ಬೇಕೆಂದು ಎರಡು ಕೈಗಳನ್ನೂ ಚಾಚಿ ಒಂದು ಹೂವಿಗೆ ಬೆರಳು ತಾಗಿಸಿದನೋ ಇಲ್ಲವೋ, ಇಡೀ ಹೂವಿನ ಗಿಡ ರಿವ್ವನೆ ಆಕಾಶಕ್ಕೆ ಹಾರಿಹೋಯಿತು.

ಇಷ್ಟಾದ ಮೇಲೆ ರಾಜನ ಮಗನಿಗೆ ಹಿಡಿಸಲಾರದಷ್ಟು ಕೋಪ ಬಂದಿತು. ಅವನು ನೌಕರರನ್ನು ಕರೆದು ಹೊಲಗಳಲ್ಲಿರುವ ಬೆಳೆಗಳನ್ನೆಲ್ಲಾ ಧ್ವಂಸ ಮಾಡುವಂತೆ ಆಜ್ಞೆ ಮಾಡಿದನು. ದೂರದಲ್ಲಿದ್ದು ರೈತರು ಇದನ್ನೆಲ್ಲಾ ನೋಡುತ್ತಲೇ ಇದ್ದರು. ಆದರೆ ಈ ದುಷ್ಟ ಕಾರ್ಯವನ್ನು ಮಾಡಿಸುವವನು ರಾಜನ ಮಗನಾದುದರಿಂದ, ಅವರೇನೂ ಅಡ್ಡಿ ಮಾಡುವ ಗೊಡವೆಗೆ ಹೋಗಲಿಲ್ಲ. ಹೊಲವು ನಾಶವಾಯಿತು.

ಅಲ್ಲಿಗೆ ಬಿಡದೆ ರಾಜನ ಮಗನು ಅರಮನೆಗೆ ಹಿಂದಿರುಗಿದ ಮೇಲೆ, ತಂದೆಯೊಡನೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಅದನ್ನು ಕೇಳಿ ರಾಜನಿಗೆ ಬಹಳ ಆಶ್ಚರ್ಯವಾಯಿತು. ಅವನು ಪಂಡಿತರನ್ನೆಲ್ಲಾ ಕರೆದು ಸಮಾವೇಶಗೊಳಿಸಿ, ನಡೆದ ಸಂಗತಿಯನ್ನು ಅವರಿಗೆ ತಿಳಿಯಪಡಿಸಿದನು. ಆದರೆ ಅವರಲ್ಲಿ ಯಾರೊಬ್ಬರಿಗೂ ಬಂಗಾರದ ಗುಲಾಬೀ ಗಿಡ ಹಾಗೆ ಮಾಯವಾಗುವುದರ ಕಾರಣವೇನೆಂದು ಹೇಳಲು ಸಾಧ್ಯವಾಗಲಿಲ್ಲ.

ರಾಜನ ಮಗನಿಗೆ ಅದರ ರಹಸ್ಯವನ್ನು ತಿಳಿದೇ ತೀರಬೇಕೆಂಬ ಹಟ ಹಿಡಿಯಿತು. ಅದಕ್ಕಾಗಿ ಅವನು ಎಷ್ಟು ದೇಶಗಳನ್ನಾದರೂ ತಿರುಗಿ, ಆ ರಹಸ್ಯ ತಿಳಿದವನನ್ನು ನೋಡಬೇಕೆಂದು ಸೊಂಟ ಕಟ್ಟಿದನು.

ಅವನು ಆ ಕೆಲಸದ ಮೇಲೆ ದೇಶಸಂಚಾರ ಮಾಡುತ್ತ, ಬಹಳ ತಿಳುವಳಿಕೆಯುಳ್ಳವಳೆಂದು ಹತ್ತು ಮಂದಿ ಹೇಳಿಕೊಳ್ಳುವ, ಒಬ್ಬಳು ವೃದ್ಧೆಯು

ಬಳಿಗೆ ಹೋಗಿ, ಬಂಗಾರದ ಗುಲಾಬೀ ಗಿಡದ ಸಮಾಚಾರವನ್ನು ಹೇಳಿ, ಕಾರಣವೇನೆಂದು ಕೇಳಿದನು.

ಎಲ್ಲವನ್ನೂ ಕೇಳಿ ಆ ವೃದ್ಧೆ "ಇದರಲ್ಲಿ ಯಾವುದೋ ದೊಡ್ಡ ರಹಸ್ಯ ಅಡಗಿದೆ, ನೀನು ಹೀಗೆ ಹೋದರೆ ಒಂದು ದೊಡ್ಡ ನಗರ ಬರುತ್ತದೆ. ಅಲ್ಲಿ ನೀನೊಬ್ಬ ಕುಳ್ಳನನ್ನು ನೋಡುವಿ, ಅವನನ್ನು ಕೇಳಿ ನೋಡು, ಹೇಳುತ್ತಾನೆ" ಎಂದಳು.

ವೃದ್ಧೆ ಹೇಳಿದ ಹಾಗೆ ರಾಜನ ಮಗನು ಹೋದನು. ಆ ನಗರದ ದ್ವಾರದ ಹತ್ತಿರದಲ್ಲೇ ಕುಳ್ಳನೊಬ್ಬನು ಕಾಣಿಸಿದನು. ರಾಜನ ಮಗನು ಅವನೊಂದಿಗೆ ಮಾಯವಾಗುವ ಗುಲಾಬೀ ಹೂವಿನ ಗಿಡದ ಸಂಗತಿಯನ್ನು ಹೇಳಿ ಕಾರಣ ಕೇಳಿದನು,

ಕುಳ್ಳನು ತಲೆಯಾಡಿಸುತ್ತಾ ಕೇಳಿ, ಕೆಲವು ಕ್ಷಣ ಮೌನವಾಗಿದ್ದು, ರಾಜನ ಮಗನೊಂದಿಗೆ, "ಆ ರೈತರ ಶ್ರಮಕ್ಕೂ ಪ್ರಾಮಾಣಿಕತೆಗೂ, ನೀತಿಗೂ ಗುರುತಾಗಿ ಆ ಬಂಗಾರದ ಗುಲಾಬೀ ಹೂವಿನ ಗಿಡ ಮೊಳೆತಿದೆ. ಆ ಬಂಗಾರದ ಗುಲಾಬೀ ಹೂಗಳನ್ನು ಕೊಯಿದು ಕೊಳ್ಳುವ ಹಕ್ಕು ಅವರ ಹೊರತು ಬೇರೆ ಯಾರಿಗೂ ಇಲ್ಲ, ಆದುದರಿಂದ ಪರಕೀಯರಾದವರಾರೂ ಅವರ ಹೊಲದ ಪೈರುಗಳನ್ನಾಗಲೀ, ಗುಲಾಬೀ ಹೂಗಳ ನ್ನಾಗಲೀ, ನಾಶಮಾಡಲು ಸಾಧ್ಯವಿಲ್ಲ. ನೆರೆಯವರ ಸಂಪತ್ತು ನೋಡಿ ಈರ್ಷ್ಯಾಸೂಯೆ ಪಡದೆ ಶ್ರಮ ಪಟ್ಟು, ಆ ಕಷ್ಟಾರ್ಜಿತದಿಂದ ತೃಪ್ತಿಪಟ್ಟು ಜೀವಿಸ ಬೇಕೆಂಬುದೇ "ಇದರಲ್ಲಿರುವ ರಹಸ್ಯ" ಎಂದನು,

ಕುಳ್ಳನು ಹೇಳಿದ ಮಾತನ್ನು ಕೇಳಿ, ರಾಜನ ಮಗನು ನಾಚಿಕೆಯಿಂದ ತಲೆ ತಗ್ಗಿಸಿದನು, ತಾನು ಮೈ ತಿಳಿಯದಷ್ಟು ಕೋಪದಿಂದ ರೈತರ ಪೈರುಪಚ್ಚೆ ಗಳಿಗೆ ಮಾಡಿಸಿದ ಹಾನಿ ಎಷ್ಟೆಂಬುದು ಅವನ ನೆನಪಿಗೆ ಬಂದಿತು,

ರಾಜನ ಮಗನು ಕುಳ್ಳನಿಗೆ ತನ್ನ ಕೃತಜ್ಞತೆಯನ್ನು ಹೇಳಿಕೊಂಡು ಸೀದಾ ತನ್ನ ರಾಜ್ಯಕ್ಕೆ ಹಿಂದಿರುಗಿ ಬಂದನು. ತನ್ನ ನೌಕರರಿಂದ ರೈತರಿಗಾದ ನಷ್ಟಕ್ಕೆ ಅವರ ಬಳಿಗೆ ಹೋಗಿ ಕ್ಷಮೆ ಕೇಳಿಕೊಂಡನು. ಅವರಿಗೆ ತಕ್ಕ ಪರಿಹಾರವನ್ನೂ ಕೊಡಿಸಿದನು.

ಕೆಲವು ದಿನಗಳ ಮೇಲೆ ರಾಜನ ಮಗನು ರೈತರ ಬಳಿಗೆ ಬಂದು ಅಲ್ಲಿಯ ದೃಶ್ಯವನ್ನು ನೋಡಿ ತುಂಬಾ ಸಂತೋಷಪಟ್ಟನು. ತನ್ನ ನೌಕರರು ಮಾಡಿದ ನಾಶಕಾರ್ಯಗಳ ಸೂಚನೆಯೇ ಇಲ್ಲದಂತೆ, ಹೊಲ ಗಳು ಮೊದಲಿನ ಹಾಗೆ ಕದಿರುಗಳಿಂದ ತುಂಬಿ ತಲೆ ದೂಗುತ್ತ, ಕಣ್ಣಿಗೆ ಹಬ್ಬದಂತೆ ಕಳೆಗೊಂಡಿದ್ದುವು.

ಬಂಗಾರದ ಗುಲಾಬೀ ಹೂವಿನ ಗಿಡವೂ ಯಥಾ ಸ್ಥಾನದಲ್ಲಿ, ಬಂಗಾರದ ಬಣ್ಣದ ಹೂಗಳಿಂದ ರಂಜಿಸುತ್ತಿದ್ದಿತು. ರಾಜನ ಮಗನು ಆ ಗಿಡಕ್ಕೆ ಕೈ ಜೋಡಿಸಿ ನಮಸ್ಕಾರ ಮಾಡಿದನು.



# ಪ್ರತಾಪನ ಸಾಹಸಗಳು

[ಅರಣ್ಯದಲ್ಲಿ ಅನಾಥ ಬಾಲನಾಗಿ ಸಿದ್ಧನಿಗೆ ಸಿಕ್ಕಿದ ಪ್ರತಾಪನು, ಚಂದೂ ಕೋತಿ ಮತ್ತು ಮೀನಾ ಎಂಬ ಬಾಲಿಕೆಯೊಂದಿಗೆ ಸ್ನೇಹವಾಗಿದ್ದನು]



ಪ್ರತಾಪನಿರುವ ಅರಣ್ಯದಲ್ಲೇ ದಾರಿದೋಚುವ ಕಳ್ಳರೂ ಇದ್ದರು. ಒಂದು ದಿನ ಆ ಕಳ್ಳರು ದಾರಿ ಸಾಗುವ ತೀರ್ಥ ಯಾತ್ರಿಕರ ಮೇಲೆ ಬಿದ್ದು, ಅವರ ಹಣವನ್ನೂ, ನಗಗಳನ್ನೂ ಅಪಹರಿಸಿದರು.



ಮರದ ಕೊಂಬೆಯಲ್ಲಿ ಅಡಗಿದ್ದ ಪ್ರತಾಪ ಮತ್ತು ಚಂದೂ ಕೋತಿ ಅದನ್ನು ನೋಡಿದರು. ಅವರು ಮರೆಯಲ್ಲೇ ಕಳ್ಳರ ಬೆಂಬತ್ತಿದರು.



ಕಳ್ಳರು ದೋಚಿಕೊಂಡುದನ್ನೆಲ್ಲ ಒಂದು ಗುಡ್ಡದ ಗುಹೆಯಲ್ಲಿ ಅಡಗಿಸಿ, ಗುಹೆಯ ಬಾಯಿಗೆ ದೊಡ್ಡ ಬಂಡೆಗಲ್ಲನ್ನು ಮುಚ್ಚಿಟ್ಟು, ಅಲ್ಲಿಂದ ಹೊರಟು ಹೋದರು.



ಪ್ರತಾಪನು ಗುಹೆಯ ಹತ್ತಿರ ಬಂದನು. ಗುಹೆಯ ಬಾಯಿಗಿಟ್ಟ ಕಲ್ಲನ್ನು ಕದಲಿಸಲು ಅವನಿಗಾಗಲಿಲ್ಲ. ಪರೀಕ್ಷಿಸಿ ನೋಡಿದಾಗ, ಕಲ್ಲಿನ ಪಕ್ಕದಲ್ಲಿ ಚಿಕ್ಕದೊಂದು ಸಂದು ದ್ವಾರವಿರುವುದು ಕಂಡಿತು.



ಪ್ರತಾಪನು ಸೈಗೆ ಮಾಡುತ್ತಲೇ, ಚಂದೂ ಕೋತಿ ಆ ಸಂದಿನೊಳಗೆ ತೂರಿ ಗುಹೆಯೊಳಗೆ ಹೋಯಿತು. ಧನದ ಮೂಟೆಯನ್ನು ಹೊರಲು ಅದರಿಂದಾಗಲಿಲ್ಲ. ಮೂಟೆಯನ್ನು ಬಿಚ್ಚಿ ಒಂದೊಂದಾಗಿ ನಗ ನಾಣ್ಯಗಳನ್ನೆಲ್ಲಾ ಸಂದಿನ ಮೂಲಕ ಪ್ರತಾಪನ ಮುಂದೆ ಇಡತೊಡಗಿತು.



ಹೀಗೆ ಸ್ವಲ್ಪ ಹೊತ್ತಿನೊಳಗೆ ಕಳ್ಳರು ದೋಚಿಕೊಂಡ ಧನವನ್ನೆಲ್ಲಾ ಹೊರಗೆ ಸೇರಿಸಿ, ಕಡೆಗೆ ಮೂಟೆ ಕಟ್ಟಿದ ವಸ್ತ್ರವನ್ನು ಕೂಡಾ ತಂದು ಪ್ರತಾಪನಿಗೆ ಕೊಟ್ಟಿತು ಚಂದೂ.



ಯಾತ್ರಿಕರು ಆ ರಾತ್ರಿ ಒಬ್ಬಳು ಅಡುಗೋಲಜ್ಜಿಯ ಮನೆಯಲ್ಲಿ ತಂಗಿದ್ದರು. ಬೆಳಗಾದ ಮೇಲೆ ಅವರು ತಮಗೆ ಬಂದ ಆಪತ್ತನ್ನು ನೆನೆದು ದುಃಖಿಸುತ್ತಾ ಪ್ರಯಾಣ ಹೊರಟರು. ದಾರಿಯಲ್ಲಿ ಅವರ ಹಿಂದಿನಿಂದ "ಸ್ವಲ್ಪ ನಿಲ್ಲಿರಿ!" ಎಂಬ ಕೂಗು ಕೇಳಿಸಿತು.



ಅವರು ನಿಂತರು. ಪ್ರತಾಪನು ಓಡುತ್ತಾ ಬಂದು, ಅವರಿಗೆ ಧನದ ಮೂಟೆಯನ್ನು ಕೊಟ್ಟನು. ಯಾತ್ರಿಕರಿಗಾದ ಆನಂದವನ್ನು ಹೇಳ ತೀರದು. ಅವರು ಪ್ರತಾಪನಿಗೆ ಏನಾದರೂ ಬಹುಮಾನ ಕೊಡಬೇಕೆನ್ನುವುದರೊಳಗೆ, ಅವನು ವೇಗವಾಗಿ ಹೊರಟು ಹೋಗಿ ಬಿಟ್ಟನು.



ಒಂದು ಸಾರಿ ಗ್ರಾಮಕ್ಕೆ ಬಂದು ಬೀಳಲಿರುವ ಕೊಳ್ಳೆಗಾರರನ್ನು ಕುರಿತು, ಪ್ರತಾಪನು ಮುಂದಾಗಿ ಗ್ರಾಮಸ್ಥರಿಗೆ ಎಚ್ಚರಿಕೆ ಕೊಟ್ಟನು. ಅದಕ್ಕಾಗಿ ಗ್ರಾಮಸ್ಥರು ಅವನಿಗೊಂದು ಕುದುರೆಯನ್ನು ಬಹುಮಾನ ಕೊಟ್ಟರು.



ಒಂದು ದಿನ ಪ್ರತಾಪನು ನದಿಯಲ್ಲಿ ಸ್ನಾನ ಮಾಡುವಾಗ, ಪ್ರವಾಹದ ವೇಗವು ಅವನನ್ನು ಒಂದು ಸುರಂಗದೊಳಗೆ ಒಯ್ದು ಸೇರಿಸಿತು. ಅಲ್ಲಿ ರಾಶಿ ರಾಶಿಯಾಗಿ ಬಂಗಾರದ ನಾಣ್ಯಗಳಿದ್ದುವು. ಅವುಗಳಲ್ಲಿ ಒಂದು ಮುಷ್ಟಿ ನಾಣ್ಯಗಳನ್ನು ತೆಗೆದುಕೊಂಡು ಹೋಗಿ ಗ್ರಾಮಸ್ಥರಿಗೆ ಹಂಚಿದನು.



ಈ ಸಂಗತಿ ಜಿಪುಣನೂ, ದುಷ್ಟನೂ ಆದ ಒಬ್ಬ ಭೂಮಾಲಿಕನಿಗೆ ತಿಳಿಯಿತು. ಅವನು ಅತಿ ಬಡವನ ಹಾಗೆ ವೇಷ ಹಾಕಿಕೊಂಡು ಪ್ರತಾಪನ ಹತ್ತಿರ ಹೋಗಿ ಸಹಾಯ ಕೇಳಿದನು.



ಅವನ ಮೇಲೆ ಪ್ರತಾಪನಿಗೆ ದಯೆಯುಂಟಾಯಿತು. ಅವನು ಭೂಮಾಲಿಕನನ್ನು ನದಿಯ ಹತ್ತಿರ ಕರೆದುಕೊಂಡು ಹೋಗಿ, ತಾನು ಈಜುತ್ತಾ ಕತ್ತಲೆಯ ಸುರಂಗದೊಳಗೆ ಹೋದನು. ಅಲ್ಲಿಂದ ಕೆಲವು ಬಂಗಾರದ ನಾಣ್ಯಗಳನ್ನು ತಂದು ಆ ಭೂಮಾಲಿಕನಿಗೆ ಕೊಟ್ಟನು.



ಭೂಮಾಲಿಕನು ಆ ಸ್ಥಳವನ್ನು ಚೆನ್ನಾಗಿ ಗುರುತಿಟ್ಟು ಕೊಂಡು, ಆ ದಿನ ರಾತ್ರಿ ಆ ನದಿಗಿಳಿದು ಈಜಿ ಸುರಂಗ ದೊಳಗೆ ಪ್ರವೇಶಿಸಿದನು. ಆದರೆ ಕತ್ತಲೆಯಲ್ಲಿ ಅವನಿಗೆ ಬಂಗಾರದ ನಾಣ್ಯಗಳು ಕಾಣಿಸಲಿಲ್ಲ. ಹುಡುಕುತ್ತಾ, ದಾರಿ ತಪ್ಪಿ ಸುರಂಗದೊಳಗೇ ಸಿಕ್ಕಿಕೊಂಡನು.



ಹಿಂದಿರುಗುವ ದಾರಿ ಕಾಣದೆ ಭೂಮಾಲಿಕನು ಎರಡು ದಿನ ಗಳವರೆಗೆ ಅಲ್ಲೇ ಇದ್ದು, ಕಡೆಗೆ ಪ್ರಾಣಭೀತಿಯಿಂದ ರಕ್ಷಣೆ ಗಾಗಿ ಕೂಗತೊಡಗಿದನು. ಗುಡ್ಡದ ಮೇಲೆ ಪ್ರತಾಪ ನೊಂದಿಗೆ ಆಡುತ್ತಿದ್ದ ಮಾನಾಳ ಕಿವಿಗೆ ಮೊದಲು ಅವನ ಕೂಗು ಕೇಳಿಸಿತು.



ಪ್ರತಾಪನು ಆಶ್ಚರ್ಯದಿಂದ ಅಲ್ಲಿದ್ದ ಒಂದು ಸುರಂಗಕ್ಕೆ ಪ್ರವೇಶಿಸಿದನು. ದುರಾಶೆಯ ಭೂಮಾಲಿಕನು ಅಲ್ಲಿ ನಡುಗುತ್ತಾ, ಪ್ರತಾಪನ ಕಾಲು ಹಿಡಿದು ರಕ್ಷಿಸುವಂತೆ ಬೇಡಿ ಕೊಂಡನು.



ಪ್ರತಾಪನು ಮತ್ತೆ ಕರುಣಾರ್ದ್ರನಾದನು, ಭೂಮಾಲಿಕನೂ ಇನ್ನೆಂದಿಗೂ ಆ ಪ್ರಾಂತಕ್ಕೆ ಬರಲಾರೆನೆಂದು ಮಾತು ಕೊಟ್ಟನು. ಪ್ರತಾಪನು ಅವನ ಕಣ್ಣಿಗೆ ಬಟ್ಟೆಕಟ್ಟಿ, ಸುರಂಗ ಮಾರ್ಗದಿಂದ ಹೊರಗೆ ಕರೆದುಕೊಂಡು ಬಂದನು.



ಆದರೆ ಭೂಮಾಲಿಕನು ಪ್ರತಾಪನ ಮೇಲೆ ಹಗೆ ಹಿಡಿದಿದ್ದನು. ಒಂದು ದಿನ ಸಾಯಂಕಾಲ ಪ್ರತಾಪನು ಕುದುರೆಯ ಮೇಲೆ ಹೋಗುತ್ತಿದ್ದಾಗ, "ರಕ್ಷಿಸಿರೋ !" ಎಂಬ ಕೂಗು ಕೇಳಿಸಿತು.



ಪ್ರತಾಪನು ಆ ಕಡೆಗೆ ಹೋದನು. ಆಗ ಪೊದರುಗಳ ಮರೆಯಲ್ಲಿ ಅಡಗಿದ್ದ ಭೂಮಾಲಿಕನೂ, ಅವನ ಸೇವಕರೂ ಪ್ರತಾಪನ ಮುಂದೆ ಥಕ್ಕನೆ ಬಂದು ಮತ್ತೆ ಹಿಡಿದುಬಿಟ್ಟರು.



ಭೂಮಾಲೀಕನು ಪ್ರತಾಪನನ್ನು ತನ್ನ ಮನೆಯ ಮಾಳಿಗೆಯ ಕೋಣೆಯಲ್ಲಿ ಬಂಧಿಸಿ, ಸುರಂಗದ ಬಂಗಾರವು ಎಲ್ಲಿರುವುದೆಂದು ಹೇಳದೆ ಹೋದರೆ, ಪ್ರಾಣ ಉಳಿಯದೆಂದು ಹೆದರಿಸಿದನು.



ಪ್ರತಾಪನ ಗೆಳೆಯ ಚಂದೂ ಕೋತಿ ಇದನ್ನೆಲ್ಲಾ ನೋಡಿಕೊಂಡೇ ಇದ್ದಿತು. ಅದು ರಾತ್ರಿಯಲ್ಲಿ ಪ್ರತಾಪನಿರುವ ಕೋಣೆಯ ಮಾಡಿನ ಹೆಂಚುಗಳನ್ನು ಎಬ್ಬಿಸಿ, ಒಂದು ಹಗ್ಗವನ್ನು ಪ್ರತಾಪನ ಕಡೆಗೆ ಇಳಿಸಿತು. ಅದನ್ನು ಹಿಡಿದು ಪ್ರತಾಪನು ಮಾಡಿನ ಮೇಲೇರಿ ಹೋದನು.



ಕೆಳಗಿರುವ ಒಂದು ಕಂಬಕ್ಕೆ ಪ್ರತಾಪನ ಕುದುರೆಯನ್ನು ಕಟ್ಟಲಾಗಿತ್ತು. ಚಂದೂ ಕೋತಿ ಅದರ ಹಗ್ಗವನ್ನು ಕಡಿದು ತುಂಡು ಮಾಡಿತು. ಪ್ರತಾಪನು ಮಾಡಿನಿಂದ ಕುದುರೆಯ ಮೇಲೆ ಹಾರಿದನು.

ಕುದುರೆಯ ಹೇಷಾರವ ಕೇಳಿ ಭೂಮಾಲೀಕನೂ, ಅವನ ನೌಕರರೂ ಹೊರಗೆ ಬಂದರು. ಅವರು ಅಡ್ಡಗಟ್ಟುವ ಮೊದಲೇ ಪ್ರತಾಪನೂ ಚಂದೂ ಕೋತಿಯೂ ಶರವೇಗದಿಂದ ಓಡಿ ಅರಣ್ಯ ಸೇರಿದರು.





ಗಂಡಾಂತರದಿಂದ ಪಾರಾಗಿ ಸ್ವೇಚ್ಛೆಯಾಗಿ ಅರಣ್ಯ ಸೇರಿದ ಪ್ರತಾಪನೂ ಚಂದೂವೂ ಬಹಳ ಸಂತಸಪಟ್ಟರು. ಪ್ರತಾಪನ ಕಣ್ಣುಗಳಿಂದ ಉದುರುವ ಆನಂದ ಬಾಷ್ಪವನ್ನು, ಚಂದೂ ಮೃದುವಾಗಿ ತನ್ನ ಕೈಗಳಿಂದ ಒರೆಸಿತು.

ಮರುದಿನ ಸೂರ್ಯೋದಯದ ಹೊತ್ತಿನಲ್ಲಿ ಪ್ರತಾಪನು, ಅರಣ್ಯದಲ್ಲಿ ತನ್ನನ್ನು ಬೆಳೆಯಿಸಿದ ಸಿದ್ಧನ. ಸಮಾಧಿಯ ಬಳಿಗೆ ಹೋಗಿ, ಭಕ್ತಿಪೂರ್ವಕ ನಮಸ್ಕಾರ ಮಾಡಿ, ಪ್ರಾರ್ಥಿಸುತ್ತಾ ನಿಂತನು.





# ನೆರವುಕೊಟ್ಟ ನವಿಲು

ಕೆಲವು ಸಾವಿರ ವರ್ಷಗಳ ಹಿಂದೆ ದಕ್ಷಿಣ ಸಮುದ್ರದಲ್ಲಿದ್ದ ಒಂದಾನೊಂದು ದ್ವೀಪದಲ್ಲಿ ಒಬ್ಬ ರಾಜನಿದ್ದನು. ಆ ದ್ವೀಪದಲ್ಲಿ ಋತುವು ತಪ್ಪದಂತೆ ಮಳೆ ಬರುತ್ತಿದ್ದಿತು. ಬೇರೆ ಕಾಲಗಳಲ್ಲಿ ಒಳ್ಳೆಯ ಸೂರ್ಯರಶ್ಮಿ ಪಸರಿಸಿಕೊಂಡಿತ್ತು. ಈ ಕಾರಣಗಳಿಂದ ಪೈರುಗಳು ಸರಿಯಾಗಿ ಫಲಿಸಿ, ಪ್ರಜೆಗಳು ಆಹಾರ ಸಮೃದ್ಧತೆಯಿಂದ ಸುಖಸಂತೋಷಗಳನ್ನು ಅನುಭವಿಸುತ್ತ ಜೀವಿಸಿಕೊಂಡಿದ್ದರು.

ಆದರೆ ರಾಜನಿಗೆ ಮಾತ್ರ ಯಾವಾಗಲೂ ಬಿಡದ ಒಂದು ಚಿಂತೆ. ಆದರಿಂದ ಅವನು ನೊಂದುಕೊಂಡೇ ಇದ್ದನು. ಇದಕ್ಕೆ ಕಾರಣ, ಅವನಿಗಿರುವ ಒಬ್ಬನೇ ಒಬ್ಬ ಮಗನು ಮಾತು ಬಾರದ ಮೂಕ. ಆ ಹುಡುಗನು ಹುಟ್ಟಿ ಬೆಳೆದ ಈ ಹತ್ತು ವರ್ಷಗಳಲ್ಲಿ ಎಲ್ಲದರಲ್ಲಿಯೂ ಸರಿಯಾಗಿದ್ದರೂ, ಒಂದು ಸಾರಿ ಕೂಡಾ ನಾಲಗೆಯಾಡಿಸಿ ಮಾತಾಡಿರಲಿಲ್ಲ.

ಆದೇ ದ್ವೀಪದ ಮತ್ತೊಂದು ಪ್ರಾಂತದಲ್ಲಿ ಪಾಂಗೋ ಎಂಬೊಬ್ಬ ಯುವಕನಿದ್ದನು. ಅವನೊಬ್ಬ ದೊಡ್ಡ ಸೋಮಾರಿ. ಸೋಮಾರಿಯಾದರೂ ಬಹಳ ಬುದ್ಧಿ ಚಾತುರ್ಯ ಉಳ್ಳವನು. ದಿನಾ ಗ್ರಾಮದಲ್ಲಿ ತಿರುಗುತ್ತ, ತನ್ನ ಸವಿಸವಿ ವಾಕ್ಚಾತುರ್ಯದಿಂದ ಕೇಳಿದವರನ್ನು ನಗಿಸಿ ಆನಂದಗೊಳಿಸುವನು. ಆದುದರಿಂದ ದಿನಾ ಅವನ ಊಟ ಊರೊಳಗೆ ಯಾರೋ ಒಬ್ಬರ ಮನೆಯಲ್ಲಿ ನಡೆಯುತ್ತಾ ಇತ್ತು. ಹೀಗೆ ಆನಂದಗೊಂಡವರೇ ಅವನ ಪೋಷಕರಾಗಿದ್ದರು.

ಹಾಗೆ ಬಹಳ ಕಾಲ ನಡೆಯಲಿಲ್ಲ. ಸ್ವಲ್ಪ ಕಾಲ ಕಳೆದ ಮೇಲೆ ಗ್ರಾಮಸ್ಥರಿಗೆ ಅವನ ಮೇಲೆ ಬೇಸರ ಬಂದಿತು. "ಕಷ್ಟಪಟ್ಟು ಏನಾದರೂ ಕೆಲಸ ಮಾಡಿ ಹೊಟ್ಟೆ ಹೊರೆಯುವುದನ್ನು ಬಿಟ್ಟು, ಸುಮ್ಮನೆ ಹರಟೆ ಹೊಡೆದು ಹೊಟ್ಟೆ ತುಂಬಿಸಿಕೊಳ್ಳಲು ನೋಡುವೆಯಾ? ಹೋಗಯ್ಯ" ಎಂದು ಎಲ್ಲರೂ ನಿಂದಿಸ ತೊಡಗಿದರು. ಅಮೃತವಾದರೂ ಹೆಚ್ಚಾಗಿ ಬಿಟ್ಟರೆ ವಿಷವಾಗುವುದೆಂದು ಹೇಳುತ್ತಾರಷ್ಟೆ? ಹಾಗಾಯಿತು ಪಾಂಗೋನಿಗೆ. ಪಾಂಗೋ ಆ ಊರಲ್ಲಿರಲು ಮುಖವಿಲ್ಲದೆ, ಬದುಕುವ ದಾರಿ ಹುಡುಕಲು ಬೇರೆ ಊರಿಗೆ ಹೊರಟನು.

ಹಾಗೆ ಹೋಗುತ್ತಾ ಇರುವಾಗ ದಾರಿಯಲ್ಲಿ ಮಧ್ಯಾಹ್ನವಾಯಿತು. ಹೊಟ್ಟೆಯೊಳಗೆ ಹಸಿವೆ ಎದ್ದು ತಕತಕ ಕುಣಿಯತೊಡಗಿತು. ಪಾಂಗೋ ಸಂದೇಹಿ





ಸುತ್ತ, ಸಮೀಪದಲ್ಲಿ ಕಂಡ ಒಂದು ಚಿಕ್ಕ ಮನೆಗೆ ಹೋಗಿ ಬಾಗಿಲು ತಟ್ಟಿದನು.

ಆ ಮನೆಯಲ್ಲಿದ್ದವಳು ಬಾಗಿಲು ತೆರೆದು ಪಾಂಗೋನ ಮುಖವನ್ನು ನೋಡಿದ ಕೂಡಲೇ, "ಎಲಯೆಲಾ ! ಬಹಳ ದೂರದಿಂದ ಬರುವಿಯೇನು? ಒಳ್ಳೆಯ ಹಸಿವೆಯಿಂದ ಬಳಲಿದ ಹಾಗೆ ಕಾಣುವಿ. ಮಧ್ಯಾಹ್ನದ ಹೊತ್ತಲ್ಲವೆ ? ಬಾ. ಊಟ ಮಾಡಿ ಬಿಡು" ಎಂದು ಒಳಗೆ ಕರೆದಳು.

ಪಾಂಗೋ ಉತ್ಸಾಹದಿಂದ ಒಳಗೆ ಹೋದನು. ಮನೆಯವಳು ಅವನಿಗೆ ಊಟ ಬಡಿಸಿ, ತಾನೂ ಬಡಿಸಿಕೊಂಡು, ಆ ಮಾತು ಈ ಮಾತು ಹೇಳುತ್ತ, ಆ ದ್ವೀಪವನ್ನು ಆಳುವ ರಾಜನನ್ನು ಕುರಿತು ಹೇಳಿದಳು :

"ಅಪ್ಪಾ, ನೀನು ನಮ್ಮನ್ನಾಳುವ ರಾಜನ ಮಗನು ಮೂಕನೆಂದು ತಿಳಿದೇ ಇರಬಹುದು. ಅವನಿಗೆ ಯಾರು ಮಾತು ಬರಿಸುವರೋ ಅವರಿಗೆ ರಾಜನು ಕೊಡುವ ಬಹುಮಾನವೇನೆಂದು ಗೊತ್ತಾ ನಿನಗೆ ? ಒಂದು ಕೋಣೆ ತುಂಬಾ ಇರುವ ಹಣ್ಣುಗಳು, ಇತರ ರುಚಿಕರವಾದ ತಿಂಡಿಗಳು, ಭಕ್ಷ್ಯಗಳು. ಇನ್ನೊಂದು ಕೋಣೆಯಲ್ಲಿ ಹಿಡಿಸಲಾರದಷ್ಟು ಬಂಗಾರ. ಮತ್ತೊಂದು ಕೋಣೆಯಲ್ಲಿ ಒಂದರ ಮೇಲೊಂದಾಗಿ ಪೇರಿಸಿಟ್ಟ ಬೆಲೆ ಬಾಳುವ ಬಣ್ಣ ಬಣ್ಣದ ವಸ್ತ್ರಗಳು, ಇಷ್ಟೆಲ್ಲಾ ಇವೆ. ಏನು ಲಾಭ ಹೇಳು ? ಇಷ್ಟರವರೆಗೂ ಆ ಬಹುಮಾನಗಳನ್ನು ತೆಗೆದುಕೊಳ್ಳುವ ಪುಣ್ಯಾತ್ಮನಿಲ್ಲ. ಮುಂದಾದರೂ ಅಂಥವನೊಬ್ಬ ಇದ್ದಾನೆಂದು ನನಗಂತೂ ತೋರುವು ದಿಲ್ಲ. ಇದಕ್ಕೇನು ಹೇಳುವಿಯಪ್ಪಾ ?" ಎಂದಳು ಆ ಮನೆಯವಳು.

ಪಾಂಗೋಗೆ ರಾಜನಿಂದ ಆ ಬಹುಮಾನಗಳನ್ನು ಪಡೆದುಕೊಳ್ಳುವ ಆಶೆಯಾಯಿತು. ಅವನು ಅಲ್ಲಿಂದ ರಾಜನನ್ನು ದರ್ಶನ ಮಾಡುವುದೆಂದೇ ನಿಶ್ಚಯಿಸಿ



ಹೊರಟನು. ಆದರೆ ಎಷ್ಟೇ ಆಲೋಚನೆ ಮಾಡಿದರೂ ಯುವರಾಜನಿಗೆ ಮಾತು ಬರಿಸುವುದು ಹೇಗೆಂಬುದು ಅವನಿಗೆ ತಿಳಿಯಲಿಲ್ಲ. ಆದರೂ ಹಿಂಜರಿಯದೆ ಅವನ ಕಾಲುಗಳು ಮುಂದೆ ನಡೆದುಕೊಂಡೇ ಇದ್ದುವು.

ದಾರಿಯಲ್ಲಿ ಅವನಿಗೊಬ್ಬ ಎಲುವುಗೂಡಿನಂತಿದ್ದ ಮುದುಕನು ಇದಿರಾದನು. ಪಾಂಗೋ ಅದುವರೆಗೂ ಅಷ್ಟೊಂದು ಸೊರಕಲನಾದ ಮುದುಕನನ್ನು ನೋಡಿರಲಿಲ್ಲ. ಆ ಮುದುಕನ ಹೆಗಲಲ್ಲಿ ಚಿಕ್ಕ ಎರಡು ಕಟ್ಟಿಗೆಗಳ ಹೊರೆಯೂ ಇದ್ದಿತು. ಅವನನ್ನು ನೋಡಿ ಪಾಂಗೋಗೆ ಕನಿಕರವಾಯಿತು. "ತಾತಾ ! ಹೊರೆ ಬಹಳ ಭಾರವಾಗಿರುವ ಹಾಗಿದೆ. ನಾನು ಸುಮ್ಮನೆ ಕೈ ಬೀಸಿಕೊಂಡು ತಾನೇ ನಡೆಯುತ್ತೇನೆ ? ನನಗೆ ನಿನ್ನ ಹೊರೆ ಕೊಡು, ನಾನು ತರುತ್ತೇನೆ"ಎಂದು ಕಟ್ಟಿಗೆಯ ಹೊರೆಯನ್ನು ತಾನೇ ಎತ್ತಿಕೊಂಡನು.

ಮುದುಕನು ಪಾಂಗೋನನ್ನು ಆಪ್ಯಾಯತೆಯಿಂದ ನೋಡಿ, ಅವನ ಪಕ್ಕದಲ್ಲೇ ನಡೆಯುತ್ತ ಮಾತಾಡು



ತ್ತಿದ್ದನು. ಮಾತಿನ ಸಂದರ್ಭದಲ್ಲಿ ಪಾಂಗೋನನ್ನು ಎಲ್ಲಿಗೆ ಹೋಗುವುದೆಂದು ಕೇಳಿದನು.

ಪಾಂಗೋ ತಾನು ಹೋಗುವ ಕೆಲಸವನ್ನು ಕುರಿತು ವಿವರವಾಗಿ ಹೇಳಿ, "ಯುವರಾಜರಿಗೆ ಹೇಗೆ ಮಾತು ಬರಿಸಬೇಕೋ ಗೊತ್ತಾಗುವುದಿಲ್ಲ" ಎಂದನು.

"ಅಷ್ಟೇನಾ ! ಇಷ್ಟೊಂದಕ್ಕೇನಾ ಮುಖವನ್ನು ಇಷ್ಟು ದೊಡ್ಡ ಹೊರೆ ಮಾಡಿಕೊಂಡದ್ದು ?" ಎಂದು ಮುದುಕನು ಸಣ್ಣಗೆ ನಗುತ್ತ, "ಅಪ್ಪಾ, ನಾನೊಂದು ಸಮಾಚಾರ ಹೇಳುತ್ತೇನೆ. ಮತ್ತೇನಿಲ್ಲ: ನೀನು ಒಂದು ಸಣ್ಣ ಕೆಲಸ ಮಾಡು. ಮೊದಲು ಪಶು ಪಕ್ಷ್ಯಾದಿಗಳಲ್ಲಿ, ಕೇಳುವವರಿಗೆ ಆನಂದ ಪಾರವಶ್ಯತೆಯಾಗುವ ಹಾಗೆ ಒಳ್ಳೆಯ ಕಂಠಸ್ವರ ಯಾವ ಪ್ರಾಣಿಗಿದೆಯೋ ಆ ಸ್ವರವನ್ನು ಯುವರಾಜನು ಕೇಳುವ ಹಾಗೆ ಮಾಡು. ಹಾಗೆ ಮಾಡಿದರೆ ಅವನಿಗೆ ಆ ಸ್ವರವನ್ನು ಕಲಿಯಬೇಕೆಂದು ಬುದ್ಧಿಯುಂಟಾಗಿ ಕೊರಳೆತ್ತುತ್ತಾನೆ. ಆ ವಿಧವಾಗಿ ಅವನಿಗೆ ಮಾತಾಡಲು ಬಂದುಬಿಡುತ್ತದೆ. ಅರಮನೆಯೊಳಗೇ ಇರುವ ರಾಜಕುಮಾರನಿಗೆ ಅಂಥಾ ಸ್ವರಗಳನ್ನು ಕೇಳಿ ಗೊತ್ತಿಲ್ಲದ್ದರಿಂದ, ಕೇಳುವಾಗ ಕುತೂಹಲ ಬರುತ್ತದೆ" ಎಂದನು.

ಹೀಗೆ ಸಲಹೆ ಮಾಡಿ ಮುದುಕನು ತನ್ನ ಹೊರೆಯನ್ನು ತೆಗೆದುಕೊಂಡು, ತನ್ನ ದಾರಿ ಹಿಡಿದು ಹೊರಟುಹೋದನು.

ಪಾಂಗೋಗೆ ಈ ಸಲಹೆಯನ್ನು ಕೇಳಿ ಬಹಳ ಸಂತೋಷವಾಯಿತು. ಅವನು ನಗರದ ಕಡೆಗೆ ನಡೆಯುತ್ತಾ ಇರುವಾಗ, ದಾರಿಯಲ್ಲಿ ಹಸಿರು ಹುಲ್ಲು ಮೇದುಕೊಂಡಿದ್ದ ಒಂದು ಹೋತವನ್ನು ನೋಡಿದನು. ಪಾಂಗೋ ಅದರ ಹತ್ತಿರ ಹೋಗಿ ಕೊಂಬು ಹಿಡಿದು ಅಲುಗಿಸಿ, "ನಿನ್ನನ್ನು ಯುವರಾಜನ ಬಳಿಗೆ ಕರೆದುಕೊಂಡು ಹೋಗುತ್ತೇನೆ. ಎಲ್ಲಿ ? ನಿನ್ನದೊಂದು ಹಾಡು ಕೇಳೋಣ !" ಎಂದನು.

ಹೋತವು ಬಾಯಿ ತೆರೆದು ಕೊರಳೆತ್ತಿ "ಬಾ, ಬಾ, ಬೇ." ಎಂದಿತು ಕರ್ಣಕಠೋರವಾಗಿ.

"ಇದು ಯುವರಾಜನು ಕೇಳುವಂತಹ ಸ್ವರವಲ್ಲಪ್ಪ" ಎಂದುಕೊಂಡು ಪಾಂಗೋ ಅದನ್ನು ಬಿಟ್ಟು ಮತ್ತೆ ಸ್ವಲ್ಪ ದೂರ ಹೋದನು. ಒಂದು ಕತ್ತೆಯೂ, ಹೇಂಟೆ ಕೋಳಿಯೂ, ಹಂದಿಯೂ ಅವನ ಕಣ್ಣಿಗೆ ಬಿದ್ದುವು. ಅವನು ಅವುಗಳನ್ನು ನೋಡಿ, "ನೀವು ಮೂವರೂ ಒಂದೊಂದು ಹಾಡು ಹಾಡಿರಿ ನೋಡುವಾ" ಎಂದನು.

ಅವು ಮೂರೂ ಉತ್ಸಾಹದಿಂದ ಕೊರಳೆತ್ತಿ ಅರಚಿದುದನ್ನು ಕೇಳಿದ ಕೂಡಲೇ, "ಇವು ಕೂಡಾ ಯುವರಾಜನು ಕೇಳುವಂಥ ಸ್ವರಗಳೇ ಅಲ್ಲ," ಎಂದುಕೊಂಡು ಅವುಗಳ ಗೊಡವೆ ಬಿಟ್ಟು, ಸ್ವಲ್ಪ ದೂರ ಸಾಗಿದನು. ನೆಲಕ್ಕೆ ತಾಗುವಂತಹ ಒಂದು ಮರದ ಕೊಂಬೆಯಲ್ಲಿ, ಬೂದು ಬಣ್ಣದಿಂದ, ಶರೀರದ

ಗರಿಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಕೆದರಿಕೊಂಡಿದ್ದ ಒಂದು ನವಿಲು ಅವನ ಕಣ್ಣಿಗೆ ಬಿತ್ತು. ಪಾಂಗೋ ಆ ನವಿಲನ್ನು ನೋಡಿ, "ನಿನ್ನನ್ನು ಯುವರಾಜನ ಹತ್ತಿರ ಕರೆದುಕೊಂಡು ಹೋಗುತ್ತೇನೆ. ಆತನೊಡನೆ ಏನಾದರೂ ಹೇಳಿಕೊಳ್ಳುವಿಯಾ ?" ಎಂದು ಕೇಳಿದನು.

ನವಿಲು ತಲೆ ಎತ್ತಿ, ಗಂಭೀರ ಭಾವದಲ್ಲಿ ಎದೆ ಯುಬ್ಬಿಸಿ ಅವನನ್ನು ನೋಡಿ, "ನಾನು ಹೇಳಿ ಕೊಳ್ಳುವಂಥಾದ್ದು ಏನೂ ಇಲ್ಲ. ನಾನು ಸ್ವರ ತೆಗೆದು ಹಾಡಲು ಶುರು ಮಾಡಿದರೆ ಎಲ್ಲರೂ ತನ್ಮಯ ರಾಗಿ ತಲೆಯಾಡಿಸಿಕೊಂಡಿರುತ್ತಾರೆ. ಅರಮನೆಗೆ ಬರುವ ಹಾಗೆ ನನಗೇನು ಕಡಿಮೆ ?" ಎಂದು ಕೂಡಲೇ ಹಾಡಲು ಪ್ರಾರಂಭಿಸಿತು.

ಅದರ ಸುಸ್ವರದ ಹಾಡನ್ನು ಕೇಳಿ, ಪಾಂಗೋ ಬಹಳ ಮೆಚ್ಚಿದನು. ಅದ್ಭುತವಾದ ಆ ಸ್ವರವನ್ನು ಯುವರಾಜನು ಕೇಳುವುದು ಒಳ್ಳೆಯದೆಂದು ಅವನಿಗೆ ತೋರಿತು.

ಅವನು ಬೇಗ ಬೇಗನೆ ನಡೆದು ಮಹಾರಾಜನ ಬಳಿಗೆ ಹೋಗಿ, "ಮಹಾರಾಜರೇ, ಯುವರಾಜರ ಮೂಗತನವನ್ನು ಹೋಗಲಾಡಿಸುವ ರಹಸ್ಯವನ್ನು ನಾನು ಕಂಡುಹಿಡಿದಿದ್ದೇನೆ. ತಾವು ಮೃಗಪಕ್ಷಿಗಳ ಸಂಗೀತದ ಸ್ಪರ್ಧೆಗೆ ಏರ್ಪಾಡು ಮಾಡಿಸಬೇಕು. ಒಳ್ಳೆಯದಾಗಿ ಹಾಡಿದವುಗಳಿಗೆ ಬಹುಮಾನ ಕೊಡ ಬೇಕು. ಆಗ ಯುವರಾಜರ ಮೂಗತನ ಹೋಗ ದಿರದು" ಎಂದನು.

ರಾಜನು ಅದಕ್ಕೆ ಒಪ್ಪಿದನು. ಸ್ಪರ್ಧೆಯ ದಿನ ರಾಜನು ರಾಣಿಯೊಂದಿಗೆ ಸಭಾಕೇಂದ್ರವನ್ನು ಅಲಂಕ ರಿಸಿದನು. ರಾಜಪರಿವಾರದವರೆಲ್ಲಾ ಸಮಾವೇಶಿತ ರಾದರು. ಪಾಂಗೋ ಮೂಕ ಯುವರಾಜನನ್ನು ಸಮೀಪದಲ್ಲಿದ್ದ, ಪೊದರಿನಂತಹ ಲತಾ ಗೃಹದ ಮರೆಗೆ ಕರೆದುಕೊಂಡು ಹೋಗಿ, "ಈಗ ನಡೆಯುವ ಹಾಡಿನ ಸ್ಪರ್ಧೆಯಲ್ಲಿ ನಾನು ಪರಿಚಯಮಾಡಿಕೊಂಡ ಮೂರು ಪ್ರಾಣಿಗಳೂ, ಎರಡು ಪಕ್ಷಿಗಳೂ ಪಾಲು ಗೊಳ್ಳಲಿವೆ. ನೀವು ಅವುಗಳ ಹಾಡುಗಳನ್ನು ಕೇಳಿ,



ಅದ್ಭುತವಾಗಿ ತೋರುವ ಹಾಡನ್ನು ಹಾಡಬೇಕು. ಹಾಗೆ ಹಾಡಲು ನಿಮಗೆ ಆಗೇ ಆಗುತ್ತದೆ" ಎಂದು ಹೇಳಿದನು.

ಮೊದಲು ಕತ್ತೆಯೂ, ಆಮೇಲೆ ಹೋತವೂ ಅದರ ಬೆನ್ನಿಗೆ ಹೇಂಟೆಯೂ, ಅದಾದನಂತರ ಹಂದಿಯೂ ಒಂದೊಂದು ಹಾಡು ಹಾಡಿ, ಅಷ್ಟಕ್ಕೆ ಸುಮ್ಮನಾಗದೆ ನಾಲ್ಕು ಕಂಠ ಬೆರೆಸಿ ಒಟ್ಟಿಗೆ ಹಾಡಿದುವು. ಕೇಳು ವವರು ನೋವಿನಿಂದ ಕಿವಿಗಳನ್ನು ಮುಚ್ಚಿಕೊಂಡರು.

ಅಷ್ಟರ ವರೆಗೆ ಅವುಗಳ ಹಾಡನ್ನು ಕೇಳುತ್ತಿದ್ದ ಕೆದರು ಗರಿಯ ನವಿಲು ಮುಂದೆ ಬಂದು ಕೊರಳೆತ್ತಿ ಸುಶ್ರಾವ್ಯವಾಗಿ ಹಾಡತೊಡಗಿತು. ಆ ಕಂಠಸ್ವರದ ಮಾಧುರ್ಯಕ್ಕೆ ಅಲ್ಲಿದ್ದವರೆಲ್ಲಾ ಆನಂದಲ್ಲಿ ತನ್ಮಯ ರಾಗಿ ಹೋದರು.

ಆ ಸಮಯದಲ್ಲಿ ಲತಾಗೃಹದ ಮರೆಯಲ್ಲಿದ್ದ ಮೂಕ ಯುವರಾಜನು ಕೊರಳೆತ್ತಿ ನವಿಲನ್ನು ಅನುಸರಿಸಿ ಹಾಡುತ್ತಾ ಹೊರಗೆ ಬಂದನು. ಅದನ್ನು ನೋಡಿ ರಾಜನೂ ರಾಣಿಯೂ ಉಳಿದವರೂ ಪರಮಾನಂದದಿಂದ ಹರ್ಷಧ್ವನಿ ಮಾಡಿದರು. ನವಿಲು ಕೂಡಾ ಯುವರಾಜನ ಕಂಠಸ್ವರವನ್ನು ಕೇಳಿ ಆಶ್ಚರ್ಯಪಡುತ್ತ, ಹಾಡುವುದನ್ನು ನಿಲ್ಲಿಸಿ, ಮತ್ತೆ ಹಾಡಲು ಪ್ರಾರಂಭಿಸಿತು. ಆದರೆ ಅದರ ಕಂಠದಿಂದ "ಕೀಕ್" ಎಂಬ ಕೆಟ್ಟ ಧ್ವನಿಯು ಹೊರತು ಹಾಡೇ ಹೊರಡಲಿಲ್ಲ. ಅದರ ಸುಸ್ವರವು ಪೂರ್ತಿ ಯಾಗಿ ರಾಜನ ಮಗನ ಕಂಠಕ್ಕೆ ಸಂಕ್ರಮಿಸಿತ್ತು.

ನವಿಲು ಕೋಪದಿಂದ "ಮೋಸ! ಮೋಸ! ಯಾರೋ ನನ್ನ ಮಧುರ ಸ್ವರವನ್ನು ಮಾಯ ಮಾಡಿದರು!" ಎಂದು ಕೂಗಿತು.

ರಾಜನು ಕನಿಕರದಿಂದ ಒಂದು ಸಾರಿ ನವಿಲನ್ನು ನೋಡಿ, ಪಾಂಗೋನೊಂದಿಗೆ, "ನೀನು ಯುವ ರಾಜನಿಗೆ ಮಾಡಿದ ಉಪಕಾರಕ್ಕೆ ಕೃತಜ್ಞನಾಗಿದ್ದೇನೆ, ಅದಕ್ಕಾಗಿ ನಿನಗೆ ಬಹುಮಾನವನ್ನೂ ಕೊಡುತ್ತೇನೆ. ಆದರೆ ನೀನು ನವಿಲಿಗೆ ಮಾಡಿದ ಅಪಕಾರಕ್ಕೆ ದಂಡನೆಯೂ ತಪ್ಪದು. ಕೋಣೆ ತುಂಬಾ ಇರುವ ಬಂಗಾರವೇನೋ ನಿನಗೆ ಕೊಡುತ್ತೇನೆ. ರಂಗುರಂಗಿನ ಅಲಂಕಾರದ ಭೂಷಣಗಳೆಲ್ಲ ನವಿಲಿಗೆ. ತನ್ನ ಸುಶ್ರಾವ್ಯವಾದ ಕಂಠಸ್ವರವನ್ನು ಕಳೆದುಕೊಂಡ ನವಿಲು ಪಕ್ಷಿ ಜಾತಿಯಲ್ಲೇ ಸೌಂದರ್ಯದ ರಾಶಿ ಯಾಗಿರುತ್ತದೆ. ಅಂಥ ಭಾಗ್ಯ ನಿನಗಿಲ್ಲದೆ ಹೋದುದೇ ನಿನಗೆ ದಂಡನೆ!" ಎಂದನು.

ಈ ವಿಧವಾಗಿ ಅತ್ಯಂತ ಬಡವನಾದ ಪಾಂಗೋ ಶ್ರೀಮಂತನಾದನು. ಮೂಗನಾದ ಯುವರಾಜನಿಗೆ ಮಾತುಗಳು ಬಂದುವು. ಬೂದು ಬಣ್ಣದ ಕೆದರು ಗರಿಗಳ ನವಿಲು ಪಕ್ಷಿಗಳಲ್ಲಿ ಸೌಂದರ್ಯದ ರಾಣಿ ಯಾಯಿತು.





# ಔರಂಗಜೇಬ್

ದಾರಾ, ಸುಜಾ, ಔರಂಗಜೇಬ್, ಮುರಾದ್ ಎಂಬ ಷಾಜಹಾನನ ನಾಲ್ವರು ಮಗಂದಿರಲ್ಲಿ ದೊಡ್ಡವನಾದ ದಾರಾನೇ ತನ್ನ ಅನಂತರ ಮೊಗಲ್ ಸಿಂಹಾಸನವನ್ನು ಅಧಿಷ್ಠಿಸಬೇಕೆಂದು ಷಾಜಹಾನ್ ಆಶಿಸಿದ್ದನು. ದಾರಾ ದೊಡ್ಡ ಪಂಡಿತ. ವೇದಗಳನ್ನೂ ಉಪನಿಷತ್ತುಗಳನ್ನೂ ಅವನು ಪರ್ಷಿಯಾ ಭಾಷೆಗೆ ಅನುವಾದ ಮಾಡಿದನು.

೧೬೫೭ ನೇ ಇಸವಿಯಲ್ಲಿ ಷಾಜಹಾನ್ ರೋಗದಲ್ಲಿ ಬಿದ್ದನು. ಆ ಸಮಯದಲ್ಲಿ ಅವನ ಕೋರಿಕೆಯನ್ನು ನೆರವೇರಿಸಲು ದಾರಾ ಮಾತ್ರವೇ ಹತ್ತಿರವಿದ್ದನು. ಉಳಿದ ಮೂವರು ಮಗಂದಿರೂ ರಾಜ್ಯದ ಮೂಲೆಗೊಬ್ಬನಂತೆ ಪ್ರತಿನಿಧಿಗಳಾಗಿದ್ದರು, ತಂದೆ ಸಾಯಲು ಬಿದ್ದಿರುವನೆಂದು ತಿಳಿದು, ಕೂಡಲೇ ಮೂವರು ಮಗಂದಿರೂ ಹೇಗಾದರೂ ರಾಜ್ಯಾಧಿಕಾರವನ್ನು ವಶಪಡಿಸಿಕೊಳ್ಳಬೇಕೆಂದು ಪಥಕ ಯೋಜಿಸತೊಡಗಿದರು.





ಅದುವರೆಗೂ ಬಂಗಾಳದಲ್ಲಿ ರಾಜ ಪ್ರತಿನಿಧಿಯಾಗಿದ್ದ ಸುಜಾ ತನ್ನನ್ನು ತಾನೇ ರಾಜನೆಂದು ಹೇಳಿಕೊಳ್ಳುತ್ತ, ಆಗ್ರಾದ ಮೇಲೆ ಸೈನ್ಯದೊಂದಿಗೆ ಸಾಗಿ ಬಂದನು. ಷಾಜಹಾನನ ಆಜ್ಞಾನುಸಾರವಾಗಿ ದಾರಾನ ಕುಮಾರ ಸುಲೈಮಾನ್ ಸಿಕೋ ತನ್ನ ಚಿಕ್ಕಪ್ಪನ ಸೈನ್ಯವನ್ನು ಇದಿರಿಸಲು ಹೊರಟನು. ವಾರಣಾಸಿಯ ಹತ್ತಿರ ಯುದ್ಧವು ನಡೆಯಿತು. ಸುಜಾ ಸೋತು ಬಂಗಾಳಕ್ಕೆ ಹಿಂದಿರುಗಿ ಹೋದನು.



ಆಗ ದಖ್ಖನ್ನಿನಲ್ಲಿದ್ದ ಔರಂಗಜೇಬ್, ಸೋದರನಾದ ಮುರಾದನೊಂದಿಗೆ ಕೂಡಿ ಮಾತಾಡಿ, ಉಳಿದಿಬ್ಬರನ್ನು ಕೊಂದು ರಾಜ್ಯವನ್ನು ಸಮನಾಗಿ ಹಂಚಿಕೊಳ್ಳೋಣವೆಂಬ ಯೋಜನೆ ಹಾಕಿದನು. ಸರಳಗುಣದವನಾದ ಮುರಾದನು ಅದಕ್ಕೆ ಒಪ್ಪಿದನು. ಇಬ್ಬರೂ ಕೂಡಿ ದಾರಾನ ಮೇಲೆ ದಾಳಿ ಮಾಡಿದರು.

ಉಭಯರ ಸೈನ್ಯಗಳೂ ದಾರಾನ ಸೇನೆಗಳನ್ನು ಆಗ್ರಾಕ್ಕೆ ಸಮೀಪದಲ್ಲಿರುವ ಸಮುಘರ್ ಪ್ರಾಂತದಲ್ಲಿ ಇದಿರಿಸಿದುವು. ರಾಜಪುತ್ರರು ದಾರಾನ ಪಕ್ಷ ವಹಿಸಿ ಹೋರಾಡಿದರು. ಆಗ ದಾರಾನು ಏರಿಕೊಂಡ ಆನೆ ಗಾಯಗೊಂಡುದರಿಂದ ದಾರಾ ಅದರ ಮೇಲಿನಿಂದ ಕೆಳಗೆ ಬಿದ್ದನು. ಆ ದೃಶ್ಯವನ್ನು ನೋಡಿದ ಅವನ ಸೈನಿಕರು ದಾರಾ ಸತ್ತನೆಂದು ಹೆದರಿ ಚೆಲ್ಲಾಚೆದರಾಗಿ ಓಡಿದರು.





ಔರಂಗಜೇಬನು ಆಗ್ರಾ ಕೋಟೆಯನ್ನು ಸುತ್ತಲೂ ಮುತ್ತಿದನು. ಅದು ಉರಿಬೇಸಗೆಯ ಕಾಲ. ಕೋಟೆಯೊಳಗೆ ನೀರಿನ ಸರಬರಾಯಿ ಆಗದಂತೆ ಮಾಡಿದನು ಔರಂಗಜೇಬ್. ರೋಗಗ್ರಸ್ತನಾದ ರಾಜನಿಗೆ ಸಹಾ ನೀರಿಗೆ ಬರವಾಗಿ ಹೋಯಿತು. ದಾಹದಿರದ ಸೈನಿಕರಿಗೆ ಶತ್ರುಸೇನೆಯೊಂದಿಗೆ ಹೋರಾಡಲು ಸಾಧ್ಯವಾಗಲಿಲ್ಲ. ಕೋಟೆ ಪತನವಾಯಿತು.

ಕೋಟೆಯೊಳಗೆ ಮುಗಿಬಿದ್ದ ಔರಂಗಜೇಬನು ತಂದೆಯನ್ನು ಪದವೀಭ್ರಷ್ಟ ಮಾಡಿದೆನೆಂದು ಸಾರಿಬಿಟ್ಟನು. ಷಾಜಹಾನ್ ಇದ್ದಲ್ಲಿಂದ ಎತ್ತಲೂ ಕದಲಲಾಗದೆ ಹೋದನು. ಅವನು ಕೋಟೆಯೊಳಗೇ ಖೈದುಗೊಳಿಸಲ್ಪಟ್ಟನು.





ಔರಂಗಜೇಬನು ಆಗ್ರಾದಿಂದ ಢಿಲ್ಲಿಯ ಮೇಲೆ ಸೈನ್ಯವನ್ನು ಸಾಗಿಸಿದನು. ತಂದೆಯನ್ನೂ, ಅಣ್ಣನನ್ನೂ ಜಯಿಸುವುದರಲ್ಲಿ ತನಗೆ ಸಹಾಯ ಮಾಡಿದ ತಮ್ಮನಾದ ಮುರಾದನನ್ನು ಮಾರ್ಗ ಮಧ್ಯದ ಮಥುರೆಯಲ್ಲಿ ಖೈದು ಮಾಡಿಸಿ ಕೊಲ್ಲಿಸಿಬಿಟ್ಟನು. ಭಯಂಕರವಾದ ಈ ದ್ರೋಹವು ಎಲ್ಲರನ್ನೂ ದಿಗ್ಭ್ರಾಂತಿಗೊಳಿಸಿತು.

ಢಿಲ್ಲಿಯನ್ನು ಸೇರಿದ ಕೂಡಲೇ ಔರಂಗಜೇಬನು ತನ್ನನ್ನು ಚಕ್ರವರ್ತಿಯಾಗಿ ಪ್ರಕಟಿಸಿಕೊಂಡನು. ಆಲಂಘೀರ್ (ಪ್ರಪಂಚವಿಜೇತ) ಎಂಬ ಬಿರುದು ಧರಿಸಿದ ಔರಂಗಜೇಬನು, ಮೊಗಲ್ ಸಾಮ್ರಾಜ್ಯದ ವಿಸ್ತರಣೆಗೆ ಶ್ರಮಿಸಿದನು. ಆದರೆ ಅವನೊಳಗಿನ ಮತದುರಭಿಮಾನ, ಪರಮತ ದ್ವೇಷ, ನಿತ್ಯಶಂಕೆ ಮೊದಲಾದ ದುರ್ಗುಣಗಳಿಂದ ಅವನು ಮೊಗಲ್ ಸಾಮ್ರಾಜ್ಯದ ಪತನಕ್ಕೆ ಕಾರಣನಾದನು.





ವಾಯುವ್ಯ ಸರಹದ್ದು ಪ್ರಾಂತಕ್ಕೆ ತಪ್ಪಿಸಿಕೊಂಡು ಹೋದ ದಾರಾ, ತನ್ನ ಮಿತ್ರನಾದ ಜಿವಾನ್ ಖಾನನ ಮನೆಯಲ್ಲಿ ಅಡಗಿಕೊಂಡನು. ಅಲ್ಲಿ ಮತ ಗ್ರಂಥಗಳನ್ನು ಓದಿಕೊಳ್ಳುತ್ತ ಪ್ರಶಾಂತ ವಾಗಿ ಕಾಲಕಳೆಯುತೊಡಗಿದನು. ಆದರೆ ಔರಂಗ ಜೇಬನ ಅಭಿಮಾನವನ್ನು ಸಂಪಾದಿಸಿಕೊಳ್ಳಲು ಜಿವಾನ್‌ಖಾನ್ ದಾರಾನನ್ನು ಅವನಿಗೆ ಒಪ್ಪಿಸಿ ಬಿಟ್ಟನು. ಅನಂತರ ದಾರಾ ಕೊಲ್ಲಲ್ಪಟ್ಟನು.

ಅರಕಾನ್ ಬೆಟ್ಟಗಳ ಕಡೆಗೆ ಓಡಿ ಹೋದ ಸುಜಾನ ಜಾಡು ಮತ್ತೆ ಕಾಣಲೇ ಇಲ್ಲ. ಬಹುಶಃ ಅರಕಾನರೇ ಅವನನ್ನು ಹತಮಾಡಿರಬೇಕೆಂದು ಹೇಳುತ್ತಾರೆ. ದಾರಾನ ಮಗ ಸುಲೈಮಾನಾ ವಿಷ ಪ್ರಯೋಗದಿಂದ ಕೊಲ್ಲಲ್ಪಟ್ಟನು. ಕಟ್ಟ ಕಡೆಗೆ ಔರಂಗಜೇಬ್ ತನ್ನೊಂದಿಗೆ ರಾಜ್ಯ ಸಿಂಹಾಸನಕ್ಕೆ ಸ್ಪರ್ಧೆಗೆ ಬರುವವರು ಯಾರೂ ಇಲ್ಲದಂತೆ ಮಾಡಿಕೊಂಡನು.





ಇಷ್ಟು ಮಾಡಿಯೂ ಔರಂಗಜೇಬನಿಗೆ ಮನಃ ಶಾಂತಿ ಇರಲಿಲ್ಲ. ಕೋಟೆಯೊಳಗೆ ಸಹಾ ಅವನು ಯಾರನ್ನೂ ನಂಬಲಾರದೆ ಹೋದನು. ಅವನ ಮೇಲೆ ಅಭಿಮಾನ ತೋರಿಸುವವರೂ ಇರಲಿಲ್ಲ. ಬಲು ಬೇಗದಲ್ಲೇ ರಾಜ್ಯದೊಳಗೆಲ್ಲಾ ಬಂಡಾಯ ಗಳು ತಲೆ ಎತ್ತ ತೊಡಗಿದುವು. ಮಥುರೆಯ ಪ್ರಾಂತದ ಜಾಟ ರೈತರು ಔರಂಗಜೇಬನ ಅಧಿಕಾರಕ್ಕೆ ವ್ಯತಿರೇಕವಾಗಿ ದಂಗೆ ಎದ್ದು ತಿರುಗಿ ಬಿದ್ದರು !



# ಬಹುಬಲೆಯ ಪಾತ್ರ

ಒಂದು ಕಾಲದಲ್ಲಿ ಬಾಗ್ದಾದ್ ನಗರದ ಸಮೀಪ ವಿದ್ದ ಕಿರ್‌ಮಾನ್ ಷಾ ಪಟ್ಟಣದಲ್ಲಿ ಉಮರ್ ಎಂಬ ತಿರುಗೂಳಿಯೊಬ್ಬನಿದ್ದನು. ಮೋಸಗಾರನಾದ ಅವನ ಮೋಸದ ಪ್ರತಾಪಕ್ಕೆ ಈಡುಜೋಡಿರಲಿಲ್ಲ. ಊರೊಳಗೆ ಬಹಳ ಮಂದಿಗೆ ಅವನ ವಿಷಯ ಗೊತ್ತಿದ್ದಿತು. ಅವನಿಗೆ ಮಹಾ ಮೋಸಗಾರನೆಂಬ ಖ್ಯಾತಿಯನ್ನೇ ಕೊಟ್ಟಿದ್ದರು. ಆದರೆ ಅವನು ಮೇಲು ನೋಟಕ್ಕೆ ಮಹಾ ದೊಡ್ಡ ಮನುಷ್ಯನಂತೆ ಕಾಣು ತ್ತಿದ್ದನು. ಬಹಳ ಮರ್ಯಾದೆಯ ಮಾತುಗಳಿಂದಲೇ ಅವನು ಜನರನ್ನು ವಂಚಿಸುತ್ತಿದ್ದನು. ಹೊಸಬರಿಗೆ ಅವನು ಬಹಳ ಯೋಗ್ಯನಾಗಿ ಕಾಣುವನು.

ಉಮರ್ ಇರುವ ಪಟ್ಟಣಕ್ಕೆ ವರ್ತಕದ ಕೆಲಸದ ಮೇಲೆ ಬಾಗ್ದಾದಿನಿಂದ ಮುಸ್ತಫಾ ಎಂಬ ಯುವಕ ನಾದ ವರ್ತಕನು ಆಗಾಗ ಬರುತ್ತಿದ್ದನು. ಅವನು ತುಂಬ ಬುದ್ಧಿವಂತನೂ ಸಾಹಸದವನೂ ನಿಜವೇ ಆದರೂ, ಹೊಗಳಿಕೆಗೆ ಉಕ್ಕಿಹೋಗುವವನು. ಎಷ್ಟಾದರೂ ಮಾನವರಲ್ಲಿ ಹೊಗಳಿಕೆಗೆ ಉಬ್ಬದವರು ಅಪೂರ್ವ ತಾನೇ ? ಈ ಸಂಗತಿ ಮೋಸಗಾರನಾದ ಉಮರನಿಗೆ ಗೊತ್ತಿಲ್ಲದಿದ್ದೀತೆ ?

ಈ ವರ್ತಕನೊಂದಿಗೆ ಪರಿಚಯ ಮಾಡಿಕೊಳ್ಳ ಬೇಕೆಂದು ಉಮರನಿಗೆ ತೋರಿತು. ಒಂದು ದಿನ ಪೇಟೆಯಲ್ಲಿ ಅವನನ್ನು ಸಂಧಿಸಿ, "ನಿಮ್ಮ ಸಂಗತಿ ಬಹಳ ಸಾರಿ ಕೇಳಿದ್ದೇನೆ. ವರ್ತಕರಲ್ಲಿ ನೀವು ರಾಜ ನಂಥವರು. ನಿಮ್ಮ ತಂದೆಯೂ ತಾತನೂ, ತಾತನ ವರ ತಾತ-ಒಬ್ಬರೇನು ಎಲ್ಲರೂ ದೊಡ್ಡ ವಂಶಕ್ಕೆ ಸೇರಿದವರು. ನಿಮ್ಮ ರೂಪ ನೋಡಿದ ಕೂಡಲೇ ಅದೆಲ್ಲವೂ ಗೊತ್ತಾಗಿ ಬಿಡುತ್ತದೆ" ಎಂದನು ಮೈ ಪುಲಕರಿಸುವಂತೆ.

ಈ ಹೊಗಳಿಕೆಗೆ ಮುಸ್ತಫಾ ಬಹಳವಾಗಿ ಸಂತೋಷಪಟ್ಟು, ಕ್ರಮವಾಗಿ ಅವನಿಗೆ ಮಿತ್ರನೂ ಆದನು. ಉಳಿದ ವರ್ತಕರು ಮುಸ್ತಫಾನ ಹತ್ತಿರ ಉಮರ್ ದೊಡ್ಡ ಮೋಸಗಾರನೆಂದೂ, ಅವನ ಹತ್ತಿರ ಹೆಚ್ಚಿಗೆ ಹಚ್ಚಿಕೊಳ್ಳಬಾರದೆಂದೂ ಹೇಳಿ ನೋಡಿದರು. ಆದರೆ ಉಮರನ ಸವಿಮಾತುಗಳ ಮುಂದೆ ಆ ಬಗೆಯ ಮಾತುಗಳು ಅವನಿಗೆ ರುಚಿಸ ಲಿಲ್ಲ. ಯಾವುದೋ ಪೂರ್ವದ್ವೇಷದಿಂದ ಹಾಗೆ ಹೇಳುತ್ತಾರೆಂದು ಅವನಿಗೆ ತೋರಿತು. ಅವರಿಬ್ಬರ ಸ್ನೇಹಕ್ಕೆ ಯಾವ ಭಂಗವೂ ಬರಲಿಲ್ಲ.







ಒಂದು ದಿನ ಉಮರ್ ಬಾಗ್ದಾದ್ ನಗರಕ್ಕೆ ಹೋಗಿ ಮುಸ್ತಫಾನನ್ನು ಸಂಧಿಸಿದನು. ಮುಸ್ತಫಾ ವರ್ತಕನು ಆವನ ಬರುವಿಕೆಗೆ ಸಂತೋಷ ವ್ಯಕ್ತ ಪಡಿಸಿ, "ಮಿತ್ರಾ, ನನ್ನನ್ನು ನೋಡಲು ಶ್ರಮ ವಹಿಸಿ ಬಹಳ ದೂರ ಪ್ರಯಾಣ ಮಾಡಿ ಬಂದಿರುವಿ. ಕೆಲವುದಿನ ಇಲ್ಲಿ ನನ್ನ ಅತಿಥಿಯಾಗಿರ ಬೇಕು" ಎಂದು ಕೇಳಿಕೊಂಡನು.

ಅದನ್ನು ಕೇಳಿ ಮೋಸಗಾರ ಉಮರ್ ತನ್ನೊಳಗೆ ಸಂತೋಷಪಡುತ್ತ, ಮೇಲೆ ವ್ಯವಧಿ ಇಲ್ಲದವನಂತೆ ಮುಖ ಮಾಡಿಕೊಂಡು, "ನೀನು ಇತ್ತೀಚೆಗೆ ಎರಡು ವರ್ಷಗಳಿಂದ ಕಿರ್ಮಾನ್‌ಪಾಕ್ಕೆ ಬರಲಿಲ್ಲ. ಏನಾಯಿತೋ ಎಂಬ ಅನುಮಾನ ಸಹಿಸಲಾಗದೆ ಹೊರಟು ಬಂದೆನು. ಬಹಳ ದಿನ ನಿಲ್ಲುವಂತಿಲ್ಲ. ಬೇಗನೇ ಹೋಗಬೇಕು" ಎಂದನು.

ಉಮರ್ ಹೀಗೆ ಹೇಳಿದುದನ್ನು ಕೇಳಿ, ಮುಸ್ತಫಾನಿಗೆ ಹಿಡಿಸಲಾಗದಷ್ಟು ಆನಂದವಾಯಿತು. ಆವನು ಉಮರನಿಗೆ ದೊಡ್ಡ ರೀತಿಯಲ್ಲಿ ಅತಿಥಿ ಮರ್ಯಾದೆಗಳನ್ನು ಮಾಡಿ ತನ್ನ ಖಾತಾದಾರರಿಗೂ, ಸಹ ವರ್ತಕರಿಗೂ, ಉಮರ್ ಒಳ್ಳೆಯ ಮಿತ್ರನೆಂದೂ, ಪ್ರಾಮಾಣಿಕನೆಂದೂ ಪ್ರಶಂಸಿಸುತ್ತ ಪರಿಚಯ ಮಾಡಿಸಿದನು.

ಆ ವಿಧವಾಗಿ ಉಮರ್ ಒಂದು ತಿಂಗಳವರೆಗೆ ಮುಸ್ತಫಾನ ಮನೆಯಲ್ಲಿದ್ದನು. ಒಂದು ದಿನ ಮುಸ್ತಫಾ ಖಾತಾದಾರರೊಂದಿಗೂ ಸಹ ವರ್ತಕರೊಂದಿಗೂ ಮಾತುಕತೆಯಾಡಿಕೊಂಡಿರುವಾಗ, ಉಮರ್ ಅವನ ಬಳಿಗೆ ಬಂದು, "ನಾನು ಬಂದು ಬಹಳ ದಿನವಾಯಿತಲ್ಲ ? ಇನ್ನು ನಾನು ಅಪ್ಪಣೆ ತೆಗೆದುಕೊಳ್ಳಬೇಕೆಂದಿದ್ದೇನೆ. ದಯವಿಟ್ಟು ನನ್ನ ಚೀಲವನ್ನು ತರಿಸಿ ಕೊಡುವಿಯಾ ?" ಎಂದು ಕೇಳಿದನು.

ಮುಸ್ತಫಾ ವಿಚಾರದಿಂದ, "ಈಗಲೇ ಹೊರಡಬೇಕೆ ? ಇನ್ನೂ ಕೆಲವು ದಿನ ನನ್ನ ಅತಿಥಿಯಾಗಿದ್ದರೆ ಸಂತೋಷಿಸುತ್ತಿದ್ದೆ. ಅದು ಸರಿ, ಚೀಲ ಅನ್ನುವಿಯಲ್ಲಾ, ಏನದು ?" ಎಂದನು.

"ಎಂಥ ಮರೆವು ನಿನಗೆ ಮಿತ್ರಾ !" ಎಂದು ಉಮರ್ ಆಶ್ಚರ್ಯ ನಟಿಸುತ್ತ, "ನಾನು ಬಂದ ಕೂಡಲೇ ಭದ್ರವಾಗಿಡುವಂತೆ ಹೇಳಿ, ಸಾವಿರ ಚಿನ್ನದ ಮೊಹರಿಗಳಿರುವ ಚೀಲವನ್ನು ನಿನ್ನ ಕೈಗೆ ಕೊಟ್ಟೆನಷ್ಟೆ? ಅದನ್ನೇ ಕೇಳಿದ್ದು. ದಯಮಾಡಿ ಅದನ್ನು ತಂದು ಕೊಟ್ಟರೆ ನನ್ನ ಊರಿಗೆ ಪ್ರಯಾಣ ಹೊರಡುತ್ತೇನೆ" ಎಂದನು.

"ನೀನು ಹೇಳುವುದು ಆಶ್ಚರ್ಯವಾಗಿದೆ. ಬಂಗಾರದ ಮೊಹರಿಗಳಿರುವ ಚೀಲ ಎನ್ನುತ್ತ, ನನ್ನ ಕೈಗೆ ನೀನು ಚೀಲ ಗೀಲ ಯಾವುದೂ ಕೊಡಲೇ ಇಲ್ಲಪ್ಪ. ಏಕೆ ಹೀಗೆ ವಿಚಿತ್ರವಾಗಿ ಮಾತಾಡುವಿ ?" ಎಂದನು ಮುಸ್ತಫಾ ಅತ್ಯಾಶ್ಚರ್ಯದಿಂದ.

ಮೋಸಗಾರ ಉಮರ್ ಆ ಮಾತು ಕೇಳುತ್ತಲೇ ಬಹಳ ಗಾಬರಿ ತೋರಿಸುತ್ತ, ಸುತ್ತಲಿರುವವರನ್ನು

ನೋಡಿದನು. ಅವರಿಗೆ ಉಮರನ ಮಾತಿನಲ್ಲಿ ನಿಜವಿರುವಂತೆಯೇ ಅನಿಸಿತು. ಅಂತಲೇ ಅವರು ಮುಸ್ತಫಾನೊಂದಿಗೆ "ನೀವು ಬಹಳ ಕಾಲಕ್ಕೆ ನಿಮ್ಮ ಮಿತ್ರನನ್ನು ಸಂಧಿಸಿದ ಉತ್ಸಾಹದಲ್ಲಿ, ಅವನು ಕೊಟ್ಟ ಚೀಲದ ಸಂಗತಿ ಮರೆತಿರಬಹುದು. ಹುಡುಕಿನೋಡಿ. ಮನೆಯೊಳಗೆ ಎಲ್ಲಿಯೋ ಒಂದು ಕಡೆ ಸಿಕ್ಕದೆ ಹೋಗದು" ಎಂದರು.

ಮುಸ್ತಫಾ ಎರಡು ಮೂರು ಕ್ಷಣ ಆಲೋಚಿಸುತ್ತ ಸುಮ್ಮನಿದ್ದು, ತಲೆಯನ್ನು ಅಡ್ಡಕ್ಕೆ ಆಡಿಸುತ್ತ, "ಇಲ್ಲ, ಇಲ್ಲ. ಹಣಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ ನನಗೆ ಮರೆತು ಹೋಗುವ ಪ್ರಶ್ನೆಯೇ ಇಲ್ಲ. ಇವನೇ ಏನೋ ಎಲ್ಲಿಯೋ ಕೊಟ್ಟು ಮರೆತು ನನ್ನ ಮೇಲೆ ಇಂತಹ ತಪ್ಪನ್ನು ಹೇಳುತ್ತಾನೆ. ಯಾರ ಹತ್ತಿರ ಕೊಟ್ಟನೋ ಏನೋ!" ಎಂದನು.

ಅದನ್ನು ಕೇಳಿದ ಮರುಕ್ಷಣವೇ ಉಮರ್ ಗಟ್ಟಿಯಾದ ಸ್ವರದಲ್ಲಿ "ಅಯ್ಯಯ್ಯೋ! ನನ್ನ ಸಾವಿರ ಮೊಹರೀ ಇವನು ನುಂಗಿಬಿಟ್ಟನಲ್ಲಾ! ಒಂದೆರಡೇ! ಸಾವಿರ ಮೊಹರಿ!" ಎಂದು ಅರಚಿದನು.

ಅವನ ಕೂಗನ್ನು ಕೇಳಿದ ಕೂಡಲೇ ಮುಸ್ತಫಾನಿಗೆ ಅವನ ನಿಜ ಸ್ವರೂಪವು ಹೊಳೆದ ಹಾಗಾಯಿತು. "ಇನ್ನು ಬಾಯಿ ಮುಚ್ಚಿ ಇಲ್ಲಿಂದ ಹೋಗಿಬಿಡು!" ಎಂದನು ಕೋಪದಿಂದ.

ಅವರಿಬ್ಬರ ವಾದವಿವಾದ ಕೇಳಿದ ಬೀದಿಯಲ್ಲಿ ಹೋಗುತ್ತಿದ್ದ ಕೆಲವರು ಅವರ ಸುತ್ತಲೂ ಸೇರಿದರು. ಅವರಿಗೆ ಯುವಕ ವರ್ತಕನಾದ ಮುಸ್ತಫಾ ಬಹಳ ಪ್ರಾಮಾಣಿಕನೆಂಬ ವಿಷಯ ಗೊತ್ತಿತ್ತು. ಆದರೆ ಮೋಸಗಾರ ಉಮರ್ ಈ ಒಂದು ತಿಂಗಳಲ್ಲಿ ತಾನು ಬಹಳ ಮರ್ಯಾದಸ್ಥನೆಂದೂ, ಸತ್ಯವಂತನೆಂದೂ ಅನೇಕರನ್ನು ನಂಬಿಸಿದ್ದನು. ಆ ಕಾರಣದಿಂದ ಅವರು ಮುಸ್ತಫಾನೇ ಸುಳ್ಳಾಡುವನೆಂದು ಅಂದುಕೊಂಡರು.



ಮುಸ್ತಫಾನಿಗೆ ಈ ಪರಿಸ್ಥಿತಿ ಬಹಳ ಅವಮಾನಕರವಾಗಿ ತೋರಿತು. ಅಲ್ಲಿ ಸೇರಿದವರಲ್ಲಿ ಮುಸ್ತಾಫಾನ ಪ್ರಾಣಮಿತ್ರನೊಬ್ಬನು, ಉಮರ್ ದೊಡ್ಡ ವಂಚಕನಾಗಿರಬೇಕೆಂದುಕೊಂಡು, ಅದ್ಭುತವಾದೊಂದು ಸೋಲಿಲ್ಲದ ಪಥಕವನ್ನು ಆಲೋಚಿಸಿ ಉಮರನನ್ನು ಸಮೀಪಿಸಿ, "ನಾವೆಲ್ಲಾ ತಿಳಿಯದೆ ಏನೋ ಒಂದು ತಪ್ಪು ಮಾಡಿಬಿಡುತ್ತೇವೆ. ಆದರೆ ನೀನು ಮಾಡಿದ ತಪ್ಪು ಬಹಳ ವಿಚಿತ್ರವಾಗಿದೆ. ನೀನು ಸಾವಿರ ಮೊಹರಿಗಳಿರುವ ಚೀಲವನ್ನು ಭದ್ರವಾಗಿಡುವಂತೆ ಹೇಳಿ ಕೊಟ್ಟದ್ದು ಮುಸ್ತಫಾನ ಹತ್ತಿರವಲ್ಲ, ನನ್ನ ಹತ್ತಿರ. ಶಾಂತನಾಗು. ಜನರೆಲ್ಲ ಹೊರಟು ಹೋದ ಕೂಡಲೇ ನಾನು ಚೀಲ ತಂದು ಕೊಡುತ್ತೇನೆ. ಈಗಲಾದರೂ ನಿನ್ನ ತಪ್ಪು ತಿಳಿದು ಕೊಂಡೆಯಾ?" ಎಂದು ಕೇಳಿದನು.

ಮೋಸಗಾರ ಉಮರ್ ಸ್ವಲ್ಪವೂ ಶಂಕಿಸದೆ, "ಅಯ್ಯಾ, ಇದರಲ್ಲಿ ನಾನು ಮಾಡಿದ ತಪ್ಪು

ಎಂಬುದೇನೂ ಇಲ್ಲ. ನಿನ್ನ ಹತ್ತಿರ ಕೊಟ್ಟ ಆ ಎರಡನೇ ಚೀಲ ಎಲ್ಲಿಗೂ ಹೋಗದೆಂದು ನನಗೆ ಗೊತ್ತಿದೆ. ಈ ಮುಸ್ತಫಾನ ಹಾಗೆ ನೀನು ಅಸತ್ಯವಾದಿಯಲ್ಲ. ಬಾಗ್ದಾದು ನಗರದ ಪೌರರೆಲ್ಲರೂ ಮೋಸಗಾರರೆಂದು ಯಾರೂ ಹೇಳಲಾರರು. ಸರಿ, ನಿನ್ನ ಹತ್ತಿರ ಕೊಟ್ಟ ಆ ಹಣದ ಚೀಲವನ್ನು ಈಗಲೇ ತರಿಸಿ ಕೊಟ್ಟುಬಿಡು " ಎಂದನು.

ಅವನ ಮಾತು ಕೇಳಿ ಮುಸ್ತಫಾನ ಮಿತ್ರನು ದಿಗ್ಭ್ರಾಂತನಾದನು. ಆಗ ಉಮರ್ ಸಣ್ಣಗೆ ರೇಗಿದಂತೆ, " ಮತ್ತೆ ತಡಮಾಡುವೆ ಏಕೆ ಮಿತ್ರಾ ? ಆ ಚೀಲ ತಂದು ಕೊಟ್ಟುಬಿಡು " ಎಂದನು.

ಮುಸ್ತಫಾನ ಆ ವರ್ತಕ ಮಿತ್ರನು ಮತ್ತೇನು ಹೇಳಲೂ ತೋರದೆ, ಮೋಸಗಾರನಿಗೆ ಸಾವಿರ ಮೊಹರಿಗಳನ್ನು ತಂದುಕೊಟ್ಟು ತನ್ನ ಮಾನ ಉಳಿಸಿಕೊಂಡನು. ಇದರಿಂದ ಅಲ್ಲಿ ಸೇರಿದ ಜನರಿಗೆ ಉಮರ್ ದೊಡ್ಡ ಧನವಂತನೆಂಬ ಅಭಿಪ್ರಾಯ ಏರ್ಪಟ್ಟಿತು. ಸಾವಿರ ಮೊಹರಿಗಳಿರುವ ಇನ್ನೊಂದು ಚೀಲವು ಮುಸ್ತಫಾನ ಹತ್ತಿರ ಇರುವುದೆಂದೇ ಅನೇಕರು ಗುಸುಗುಸು ಹೇಳಿಕೊಂಡರು.

ಈ ಪರಿಸ್ಥಿತಿಯನ್ನು ನೋಡಿ ಮುಸ್ತಫಾನು ಇನ್ನು ತನ್ನ ಮಾತನ್ನು ಯಾರೂ ನಂಬಲಾರರೆಂದು ತಿಳಿದು, " ಓ! ಯಾವುದೋ ಒಂದು ಚೀಲ ಒಳಗಿಟ್ಟ ಹಾಗೆ ಈಗ ನೆನಪಿಗೆ ಬಂತು " ಎನ್ನುತ್ತ ಒಳಗೆ ಹೋಗಿ, ಸಾವಿರ ಮೊಹರಿಗಳನ್ನು ಒಂದು ಚೀಲದಲ್ಲಿ ತುಂಬಿಸಿ ತಂದು ಉಮರನಿಗೆ ಕೊಟ್ಟು ಕೈ ಹೊಸಕಿಕೊಂಡನು. ಉಮರ್ ಸಂತೋಷದಿಂದ ಬಾಗ್ದಾದನ್ನು ಬಿಟ್ಟು ಕಿರ್‌ಮಾನ್‌ಷಾದ ದಾರಿ ಹಿಡಿದು ನಡೆದನು.

ಕೆಲವು ದಿನಗಳ ಮೇಲೆ ಮೋಸಗಾರ ಉಮರನ ಸಮಾಚಾರ ತಿಳಿದವರು ಮುಸ್ತಫಾನನ್ನು ನೋಡಿ, " ಹೊಗಳಿಕೆಗೆ ಉಬ್ಬಿ ಹೋಗಬಾರದೆಂಬ ಸಂಗತಿ ಈಗ ನಿಮಗೆ ಚೆನ್ನಾಗಿ ಗೊತ್ತಾಗಿರಬೇಕು. ನೆನಪಿಟ್ಟುಕೊಳ್ಳಿ. ಈ ಪಾಠವನ್ನು ನೀವು ಬಹಳ ಬೆಲೆ ಕೊಟ್ಟು ಕೊಂಡುಕೊಂಡಿದ್ದೀರಿ " ಎಂದರು.

" ಆ ಮಾತು ಮೂರುಕಾಲಕ್ಕೂ ನಿಜ " ಎಂದನು ಯುವಕ ವರ್ತಕ ಮುಸ್ತಫಾ ತಲೆಯಾಡಿಸುತ್ತ. ಅದನ್ನು ಕೇಳಿ ಅವನ ಆಪ್ತ ಮಿತ್ರನಾದ ಎರಡನೇ ವರ್ತಕನು, " ನಾನು ಬಹಳ ಬುದ್ಧಿವಂತನೆಂದು ಅಂದುಕೊಂಡಿದ್ದೆ. ಆ ಮೋಸಗಾರನ ಹತ್ತಿರ ಎಂಥ ಬುದ್ಧಿಗೇಡಿಯಾಗಿ ವರ್ತಿಸಿದೆ! ನಾನು ಕಲಿತ ಪಾಠಕೂಡಾ ಅವನಿಗೆ ಕೊಟ್ಟ ಹಣದ ಬೆಲೆಗಿಂತ ಕಮ್ಮಿಯದೇನಲ್ಲ. ನಾವಿಬ್ಬರೂ ಬಹಳ ಬೆಲೆ ಬಾಳುವ ಪಾಠಗಳನ್ನೇ ಕಲಿತೆವು. ಇದನ್ನು ಮರೆಯಲು ಸಾಧ್ಯವಿಲ್ಲ " ಎಂದನು.





# ಮೊಂಡುಬುದ್ಧಿ

ಒಂದು ಕಾಲದಲ್ಲಿ ಕೃಪಾನಂದರೆಂಬ ಗುರುಗಳು, ವರ್ಷದಲ್ಲಿ ಆರು ತಿಂಗಳವರೆಗೆ ತನ್ನ ಆಶ್ರಮದ ಶಿಷ್ಯರಿಗೆ ವಿದ್ಯಾಬೋಧನೆ ಮಾಡುತ್ತಿರುವರು. ಉಳಿದ ಆರು ತಿಂಗಳವರೆಗೆ ಶಿಷ್ಯರನ್ನು ಅವರ ಪಾಡಿಗೆ ಓದಿಕೊಳ್ಳಲು ಹೇಳಿ, ದೇಶಾಟನೆಗೆ ಹೊರಟು ಪ್ರಜೆಗಳಿಗೆ ಧರ್ಮಬೋಧನೆ ಮಾಡಿ ಹಿಂದಿರುಗಿ ಆಶ್ರಮಕ್ಕೆ ಬರುವರು.

ಹೀಗೆ ಒಂದು ಸಾರಿ ಅವರು ದೇಶಾಟನೆ ಮಾಡುತ್ತ, ಒಂದು ಊರನ್ನು ತಲಪಿದರು. ಆ ಗ್ರಾಮದವರೆಲ್ಲಾ ಅವರಿಗೆ ದೊಡ್ಡ ರೀತಿಯಲ್ಲಿ ಸ್ವಾಗತ ಮಾಡಿ, ರಾಮಾಲಯದಲ್ಲಿ ಬಿಡದಿ ಏರ್ಪಡಿಸಿದರು. ಆ ದೇವಾಲಯದ ಪಟಾಂಗಣದಲ್ಲಿ ರಾತ್ರಿ ಮಹಾಸಭೆ ಸೇರಿತು. ಕೃಪಾನಂದರು ಅಲ್ಲಿ ಸೇರಿದವರಿಗೆ ಧಾರ್ಮಿಕ, ಆಧ್ಯಾತ್ಮಿಕ ವಿಷಯಗಳನ್ನು ವಿವರಿಸಿ ಭಾಷಣ ಮಾಡ ತೊಡಗಿದರು.

ಜನರೆಲ್ಲ ಬಹಳ ಆಸಕ್ತಿಯಿಂದಲೂ, ಕುತೂಹಲ ದಿಂದಲೂ ಅವರು ಹೇಳುವುದನ್ನು ಕೇಳುತ್ತಿದ್ದರು. ಆಗ ಜನರ ಮಧ್ಯದಲ್ಲಿ ಕುಳಿತಿದ್ದ ಆ ಊರಿನ ಸಾಹುಕಾರನು ಏಕೋ ಎದ್ದು ನಿಂತನು.

ಕೃಪಾನಂದರು ಅವನಿಗೇನೋ ಮುಖ್ಯವಾದ ಧರ್ಮಸಂದೇಹ ಬಂದಿರಬೇಕೆಂದು ಭಾವಿಸಿ, "ಅಪ್ಪಾ, ಏನು ನಿನಗೆ ಬಂದ ಸಂದೇಹ ? ಕೇಳು" ಎಂದರು. ಅದಕ್ಕೆ ಸಾಹುಕಾರನು ಬಹಳ ವಿನಯದಿಂದ, "ಮಹಾಸ್ವಾಮಿ, ನನಗೆ ಮನೆಯಿಂದ ಹೊರಟು ಇಲ್ಲಿಗೆ ಬಂದ ಸಮಯದಿಂದಲೂ ಎಲ್ಲವೂ ಸಂದೇಹಗಳೇ. ಅವುಗಳಲ್ಲಿ ಚಿಲ್ಲರೆ ಸಂದೇಹಗಳ ಮಾತು ಹೋಗಲಿ, ಎಲ್ಲದಕ್ಕಿಂತಲೂ ದೊಡ್ಡ ಸಂದೇಹವು ಮನೆಯ ರಕ್ಷಣೆಯನ್ನು ಕುರಿತದ್ದೇ. ಕಬ್ಬಿಣದ ಪೆಟ್ಟಿಗೆಯಲ್ಲಿರುವ ಹಣ, ಮನೆಯ ಆವರಣ ದಲ್ಲಿರುವ ಧಾನ್ಯಗಳ ಕಣಜ ಇಂಥವುಗಳನ್ನು ಸಂಬಳದ ನೌಕರರ ಕಾವಲಿಗೆ ಬಿಡುವುದು ಅಷ್ಟೊಂದು ಕ್ಷೇಮವಲ್ಲವಷ್ಟೆ ? ಅದಕ್ಕೇ ಮನೆಗೆ ಹೊರಡಲು ಎದ್ದು ನಿಂತೆನು. ಇನ್ನು ಹೊರಟೆ" ಎಂದು ಹೇಳಿ ಅಲ್ಲಿಂದ ಸೀದಾ ಮನೆಗೆ ಹೋಗಿಬಿಟ್ಟನು.

ಸಾಹುಕಾರನ ಮಾತುಗಳನ್ನು ಕೇಳಿ ಅಲ್ಲಿ ಕೂಡಿದ ಜನರಿಗೇನೂ ಆಶ್ಚರ್ಯವಾಗಲಿಲ್ಲ. ಆದರೆ ಕೃಪಾನಂದ ರೊಂದಿಗಿದ್ದ ಪ್ರಧಾನ ಶಿಷ್ಯನಾದ ಶೇಖರನಿಗೆ ಬಹಳ ಆಶ್ಚರ್ಯವಾಯಿತು. ಅವನು ಸಭೆ ಮುಗಿಯುವ



ವಿ. ಬಾಬೂರಾವು





ವರೆಗೂ ಸುಮ್ಮನಿದ್ದು, ಸಭೆ ಮುಗಿದು ಕೃಪಾನಂದರು ಬಿಡದಿಗೆ ಹಿಂದಿರುಗಿದ ಮೇಲೆ ಅವರೊಂದಿಗೆ, "ಗುರುವರ್ಯಾ, ಆ ಸಾಹುಕಾರನ ಮಾತುಗಳನ್ನು ಕೇಳಿದಿರಷ್ಟೇ? ಅವನು ಧನಸಂಪಾದನೆ ಮತ್ತು ಅದರ ರಕ್ಷಣೆಯ ಹೊರತು ದೈವಭಕ್ತಿಯ ಒಂದಗುಳು ಕೂಡಾ ಹೆಕ್ಕುವವನಲ್ಲವೆಂದು ಕಾಣುತ್ತದೆ. ಅಂಥವರು ಇನ್ನೂ ಅನೇಕರು ಇರಬಹುದಷ್ಟೇ? ಆದುದರಿಂದ ತಾವು ಮುಖ್ಯವಾಗಿ ಅಂಥವರ ಹೃದಯದಲ್ಲಿ ದೈವ ಭಕ್ತಿ ಚಿಗುರುವಂತೆ ಮಾಡಬೇಕಾದುದು ಅತ್ಯಗತ್ಯ ವಲ್ಲವೆ?" ಎಂದನು.

ಶಿಷ್ಯನ ಮಾತು ಕೇಳಿ ಕೃಪಾನಂದರು ಮುಗುಳುನಗೆ ನಕ್ಕು, "ಅಪ್ಪಾ, ನಿನ್ನ ಸಲಹೆ ಮೆಚ್ಚುವಂತಹುದೇ. ಆದರೆ ಕೆಲವರಿಗೆ ಧನಾರ್ಜನೆಯಲ್ಲಿರುವ ಆಸಕ್ತಿ ಮತ್ಯಾವುದರ ಮೇಲೂ ಇರಲಾರದು. ಅಂತಹವರಿಗೆ ದೈವಭಕ್ತಿ, ಧರ್ಮಕಾರ್ಯಗಳನ್ನು ಬೋಧಿಸುವುದು ಕೂಡಾ ವ್ಯರ್ಥ ಪ್ರಯಾಸವಾಗಿ ಬಿಡುತ್ತದೆ. ನನ್ನ ಸಹಾಧ್ಯಾಯಿಯಾಗಿದ್ದ ಬೋಧಾನಂದನಿಗೆ ಈ ವಿಷಯದಲ್ಲಿ ಒಂದು ವಿಚಿತ್ರ ಅನುಭವವಾಗಿದೆ. ಅದನ್ನು ಕೇಳಿದರೆ ನಿನ್ನ ಸಂದೇಹ ಪರಿಹಾರ ವಾಗುತ್ತದೆ. ಹೇಳುತ್ತೇನೆ ಕೇಳು" ಎಂದು ಆ ಸಂಗತಿ ಯನ್ನು ಹೇಳತೊಡಗಿದರು.

ಬೋಧಾನಂದನು ಆಶ್ರಮವನ್ನು ಮಾಡಿಕೊಂಡು, ಶಿಷ್ಯರನ್ನು ಇಟ್ಟುಕೊಂಡಿರಲಿಲ್ಲ. ಅವನು ಯಾವಾಗಲೂ ದೇಶಾಟನೆ ಮಾಡುತ್ತ, ಪ್ರಜೆಗಳಿಗೆ ಒಳ್ಳೊಳ್ಳೆಯ ಮಾತುಗಳನ್ನು ಹೇಳುತ್ತ, ಅವರಿಗೆ ಪುಣ್ಯಕಾರ್ಯಗಳ ಮೇಲೆ ಆಸಕ್ತಿ ಹುಟ್ಟುವಂತೆ, ಒಳ್ಳೆಯ ಮಾರ್ಗದಲ್ಲಿ ನಡೆಯುವ ಪ್ರೇರಣೆಯಾಗು ವಂತೆ ಧರ್ಮಬೋಧೆ ಮಾಡಿಕೊಂಡಿರುತ್ತಾನೆ.

ಒಂದು ಸಾರಿ ಅವನು ಒಂದು ಗ್ರಾಮಕ್ಕೆ ಹೋದನು. ಅಲ್ಲಿ ಭದ್ರಯ್ಯನೆಂಬ ವ್ಯಾಪಾರಿಯನ್ನು ಕುರಿತು ಹತ್ತು ಮಂದಿ ದೊಡ್ಡ ರೀತಿಯಲ್ಲಿ ಮಾತಾಡುವುದನ್ನು ಕೇಳಿದನು. ಈ ಭದ್ರಯ್ಯನು ವ್ಯಾಪಾರದ ವಿಷಯದಲ್ಲಿ ಯಾರನ್ನೂ ನಂಬುವವ ನಲ್ಲ, ಎಲ್ಲವನ್ನೂ ಸ್ವತಃ ತಾನೇ ನೋಡಿಕೊಳ್ಳು ವವನು, ಬಹು ದೊಡ್ಡ ಲೋಭಿ. ಲಕ್ಷಗಟ್ಟಲೆ ಲಾಭ ಬಾಚಿಕೊಂಡವನು.

"ನನ್ನ ಕೆಲಸ ಇಂಥವರಿಂದ ಧರ್ಮಕಾರ್ಯ ಗಳನ್ನು ಮಾಡಿಸಿ, ಅವರು ಸ್ವಲ್ಪ ಪುಣ್ಯ ಸಂಪಾದಿಸಿ ಕೊಳ್ಳುವಂತೆ ಮಾಡುವುದೇ, ಅವನ ಮನೆ ಎಲ್ಲಿದೆಯೋ ನನಗೆ ತೋರಿಸಿರಿ" ಎಂದು ಬೋಧಾ ನಂದನು ಜನರನ್ನು ಕೇಳಿದನು.

ಅವರು ಬೋಧಾನಂದನಿಗೆ ಭದ್ರಯ್ಯನ ಮನೆಯ ದಾರಿ ತೋರಿಸಿದರು. ಭದ್ರಯ್ಯನು ಮನೆಗೆ ಬಂದ ಬೋಧಾನಂದನಿಗೆ ಬಹಳ ಭಕ್ತಿಪೂರ್ವಕವಾಗಿ ಸ್ವಾಗತ ಹೇಳಿಕೊಂಡು, "ಸ್ವಾಮೀ, ತಾವು ಒಬ್ಬರೇ ಇರುವ ಸಮಯ ನೋಡಿ ನಾನೇ ನಿಮ್ಮ ಬಳಿಗೆ ಬಂದು ತಮ್ಮ ದರ್ಶನ ಮಾಡಬೇಕೆಂದಿದ್ದೆ. ಆದರೆ

ನನ್ನ ಮನಸ್ಸನ್ನು ತಿಳಿಯಬಲ್ಲವರಾದ ಮಹಾತ್ಮರು ತಾವು. ತಾವಾಗಿಯೇ ನನ್ನ ಮನೆಗೆ ಬಂದಿರಿ. ತಮ್ಮಲ್ಲಿ ಅನೇಕ ಮಹಿಮೆಗಳಿವೆ. ಪ್ರತ್ಯೇಕವಾಗಿ ವಂದಿಸುತ್ತೇನೆ. ನನ್ನ ಸಿರಿಸಂಪತ್ತುಗಳು ಇನ್ನಷ್ಟು ವೃದ್ಧಿಯಾಗುವ ಹಾಗೆ ಆಶೀರ್ವಾದ ಮಾಡಿರಿ" ಎಂದು ಪ್ರಾರ್ಥಿಸಿದನು,

ಅವನ ಮಾತು ಕೇಳಿ ಬೋಧಾನಂದನು ಆಶ್ಚರ್ಯಪಡುತ್ತ, "ಭದ್ರಯ್ಯಾ, ಈಗಾಗಲೇ ನಿನಗೆ ಅಂತ್ಯವಿಲ್ಲದಷ್ಟು ಸಿರಿಸಂಪತ್ತುಗಳು ಸೇರಿವೆ. ಇನ್ನೇನು ಕಡಿಮೇ ? ನನ್ನ ಮಾತನ್ನು ಜಾಗರೂಕತೆಯಿಂದ ಆಲೋಚನೆ ಮಾಡಿಕೋ" ಎಂದನು.

"ಆಗಲಿ ಸ್ವಾಮಿ. ತಾವು ಹೇಳಿದಂತೆಯೇ ನಡೆಯುತ್ತೇನೆ. ಅಪ್ಪಣೆಯಾಗಲಿ" ಎಂದನು ಭದ್ರಯ್ಯ.

"ನೋಡಪ್ಪಾ, ನೀನು ಎಷ್ಟೇ ಸಂಪಾದನೆ ಮಾಡಿದರೂ ಹೋಗುವಾಗ ನಿನ್ನೊಂದಿಗೆ ಒಂದು ಹುಲ್ಲು ಕಡ್ಡಿಯೂ ಬಾರದು. ನಿನಗಿರುವ ಸಂಪತ್ತನ್ನು ಪುಣ್ಯಕಾರ್ಯಗಳಿಗಾಗಿ ವಿನಿಯೋಗಿಸು, ಸತ್ಯಸ್ವರೂಪನಾದ ಭಗವಂತನ ಮೇಲೆ ಮನಸ್ಸನ್ನು ನೆಲೆಗೊಳಿಸು" ಎಂದು ಉಪದೇಶ ಮಾಡಿದನು ಬೋಧಾನಂದ.

"ಆಯಿತು. ಹಾಗೆಯೇ ಮಾಡಿದೆನೆಂದುಕೊಳ್ಳಿ. ಅದರಿಂದ ನನಗೆ ಸಿಗುವ ಒಳಿತುಗಳು ಏನೇನು ?" ಎಂದು ಭದ್ರಯ್ಯನು ಕೇಳಿದನು.

ಭದ್ರಯ್ಯನು ವ್ಯಾಪಾರಿಯಾದುದರಿಂದ, ವ್ಯಾಪಾರ ವ್ಯವಹಾರಗಳಲ್ಲಿ ಉಪಯೋಗಿಸುವ ಮಾತುಗಳಿಂದಲೇ ಹೇಳಿದರೆ ಅವನಿಗೆ ಬೇಗ ಅರ್ಥವಾಗುವುದೆಂದುಕೊಂಡು ಬೋಧಾನಂದನು, "ಪುಣ್ಯಕಾರ್ಯಗಳನ್ನು ಮಾಡುವುದರಿಂದ ನಿನಗಾಗುವ ಒಳಿತುಗಳು ಅನೇಕ ಬಗೆಯ ಲಾಭಗಳೇ. ನೀನು ಮಾಡುವ ಪುಣ್ಯಕಾರ್ಯಗಳ ಲೆಕ್ಕಕ್ಕೆ ತಕ್ಕ ಹಾಗೆ ಭಗವಂತನು ಸ್ವರ್ಗದಲ್ಲಿ ನಿನ್ನ ಹೆಸರಿನಲ್ಲಿ ಸ್ವಲ್ಪ ಸ್ಥಳವನ್ನು ಪ್ರತ್ಯೇಕಿಸಿಡುತ್ತಾನೆ. ಅಲ್ಲಿಯೇ ನಿನಗೆ ಶಾಶ್ವತವಾಗಿರಲು, ಸುಖಗಳನ್ನು ಅನುಭವಿಸಲು ಸೌಕರ್ಯವಾಗುತ್ತದೆ. ಪುಣ್ಯಕಾರ್ಯಗಳ ಖರ್ಚು ಎಂದರೆ ಮೂಲಧನವೆಂದೇ ಅರ್ಥ" ಎಂದನು.





ಯನ್ನು ಕೂಡಹಾಕಿದ್ದಾನೆಂತಲೂ ಗೊತ್ತಾಯಿತು. ಕೂಡಲೇ ಬೋಧಾನಂದನು ಭದ್ರಯ್ಯನ ಮನೆಗೆ ಹೋಗಿ, "ಏನಿದು ಭದ್ರಯ್ಯಾ, ನಿನ್ನ ಸಮಾಚಾರ ವಿಚಾರಿಸಿ ತಿಳಿದುಕೊಂಡೆನು. ನಾನು ಹೇಳಿದಂತೆ ದಾನಧರ್ಮಗಳನ್ನು ಮಾಡಿ ಪುಣ್ಯ ಸಂಪಾದಿಸಿ ಕೊಳ್ಳುತ್ತೇನೆಂದು ನನ್ನ ಮುಂದೆ ಒಪ್ಪಿಕೊಂಡೆಯಷ್ಟೆ? ಈಗ ನೀನು ಮಾಡುತ್ತಿರುವುದೇನಿದು ? ನಾನು ಹೇಳಿದ ಮಾತು ನಿನಗೆ ಸರಿಯಾಗಿ ಅರ್ಥವಾಗಲಿಲ್ಲ ವೇನು ?" ಎಂದು ಕೇಳಿದನು.

ಭದ್ರಯ್ಯನು ತುಂಬಾ ವಿನಯದಿಂದ, "ಸ್ವಾಮಿ, ತಾವು ಕೋಪಿಸಬಾರದು. ನೀವು ಹೇಳಿದ ಮಾತು ಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ಆಲೋಚಿಸಿ ನೋಡಿಯೇ ಹೀಗೆ ಮಾಡುತ್ತಿದ್ದೇನೆ. ತಾವು ಕೋಪಿಸುವಂತೆ ಏನಾಯಿತೆಂಬುದೇ ನನಗೆ ಅರ್ಥ ವಾಗುವುದಿಲ್ಲ" ಎಂದನು.

"ಅಂದರೆ ನನ್ನ ಮಾತುಗಳು ನಿನಗೆ ಇನ್ನಷ್ಟು ಧನಾರ್ಜನೆ ಮಾಡಲು ಪ್ರೋತ್ಸಾಹಕೊಟ್ಟಂತಾಯಿ ತೇನು ?" ಎಂದು ಬೋಧಾನಂದನು ಆಶ್ಚರ್ಯ ದಿಂದ ಕೇಳಿದನು.

"ಸ್ವಾಮಿ, ನನ್ನ ಬಿನ್ನಹ ಕೇಳಬೇಕು. ಇಲ್ಲಿಯ ವ್ಯವಹಾರದ ಹಾಗೆಯೇ ಅಲ್ಲಿಯೂ ವ್ಯವಹಾರ ನಡೆಯುತ್ತದೆಂದು ತಮ್ಮ ಮಾತಿನಿಂದ ಗೊತ್ತಾಗು ತ್ತದೆ. ಇಲ್ಲಿ ನಾನು ಪುಣ್ಯಕಾರ್ಯ ಮಾಡಿದರೆ ಸ್ವರ್ಗದಲ್ಲಿ ನನ್ನ ಹೆಸರಿನಲ್ಲಿ ಜಮೆಕಟ್ಟಿ ಸ್ಥಳವನ್ನು ಪ್ರತ್ಯೇಕಿಸುತ್ತಾನಷ್ಟೇ ಭಗವಂತ ? ಅದೇನೋ ಚೆನ್ನಾಗಿದೆ. ಅದರಲ್ಲಿರುವ ತೊಂದರೆಗಳು ತಮ್ಮಂಥ ವರಿಗೆ ಗೊತ್ತಾಗಲಾರದು" ಎಂದು ಭದ್ರಯ್ಯನು ಹೇಳಲು "ಅದೇನು ತೊಂದರೆ ?" ಎಂದನು ಬೋಧಾನಂದ.

"ನನ್ನಂಥವನು ಮಾಡುವ ಈ ಸಣ್ಣ ವ್ಯವಹಾರ ಗಳಲ್ಲಿ ಕೂಡಾ ನಾನು ಪ್ರಮಾದವಶಾತ್ ಒಬ್ಬರ

ಆ ಮಾತು ಕೇಳಿ ಭದ್ರಯ್ಯನು ಬಹಳ ಸಂತೋಷ ದಿಂದ, "ಸ್ವಾಮಿ, ಇಂತಹ ಒಳ್ಳೆಯ ಲಾಭದಾಯಕ ವಿಷಯಗಳನ್ನು ಹೇಳುವವರು ಈವರೆಗೆ ಯಾರೂ ಇರಲಿಲ್ಲ. ನನ್ನ ಅದೃಷ್ಟವಶದಿಂದ ತಾವೇ ಇಲ್ಲಿಯ ವರೆಗೆ ದಯಮಾಡಿ ನನಗೆ ಒಳ್ಳೆಯ ಜ್ಞಾನವನ್ನು ಬೆಳಗಿಸಿದಿರಿ. ಇವತ್ತಿನಿಂದ ನೀವು ಹೇಳಿದ ಹಾಗೆಯೇ ನಡೆದುಕೊಳ್ಳುತ್ತೇನೆ" ಎಂದನು.

ಅವನಲ್ಲಿ ಉಂಟಾದ ಬದಲಾವಣೆಯನ್ನು ನೋಡಿ ಬೋಧಾನಂದನು ಬಹಳ ಸಂತೋಷಪಟ್ಟು, ಅಲ್ಲಿಂದ ಇನ್ನೊಂದು ಗ್ರಾಮಕ್ಕೆ ಹೊರಟುಹೋದನು.

ಕೆಲವು ತಿಂಗಳ ಮೇಲೆ ಬೋಧಾನಂದನು ಹಿಂದಿರುಗುವಾಗ ಅದೇ ಗ್ರಾಮಕ್ಕೆ ಮತ್ತೆ ಬಂದನು. ಅವನಿಗೆ ಭದ್ರಯ್ಯನ ನೆನಪು ಬಂದು ವಿಚಾರಿಸಲಾಗಿ. ಅವನು ಈ ಮಧ್ಯಕಾಲದಲ್ಲಿ ಒಂದೇ ಒಂದು ಪುಣ್ಯಕಾರ್ಯ ಕೂಡಾ ಮಾಡಲಿಲ್ಲವೆಂದು ತಿಳಿಯಿತು. ಆದರ ಮೇಲೆ ಇನ್ನಿಷ್ಟು ಆಸ್ತಿ

ಖಾತೆಯಲ್ಲಿ ಬರೆಯುವ ಲೆಕ್ಕವನ್ನು ಇನ್ನೊಬ್ಬರ ಖಾತೆಯಲ್ಲಿ ಬರೆದು ಬಿಡುತ್ತೇನೆ. ಇಷ್ಟು ದೊಡ್ಡ ಲೋಕದಲ್ಲಿ ನನ್ನ ಹೆಸರಿನವರು ಎಷ್ಟೋ ಮಂದಿ ಇರಬಹುದಷ್ಟೆ ? ಹಾಗಿರುವಾಗ ನಾನು ಮಾಡಿದ ಪುಣ್ಯಗಳ ಜಮೆ ನನ್ನ ಖಾತೆಯಲ್ಲೇ ಇದ್ದು ನನಗೇ ಸಿಗುವುದೆಂಬುದಕ್ಕೆ ನಂಬಿಗೆ ಏನಿದೆ ? ರಸೀದಿ ಕೂಡಾ ಇಲ್ಲ, ಹೀಗಾದರೆ ಕಡೆಗೆ ನಾನು ಅಲ್ಲಿಗೆ ಹೋಗಿ ಮೇಲೆ ಕೆಳಗೆ ನೋಡುತ್ತಾ ನಿಲ್ಲಬೇಕಾದೀತಲ್ಲಾ !" ಎಂದನು ಭದ್ರಯ್ಯ.

ಭದ್ರಯ್ಯನ ಮಾತಿನಿಂದ ಬೋಧಾನಂದನು ತುಂಬ ಬೆರಗಾಗಿ, "ಇಷ್ಟು ದೊಡ್ಡ ವ್ಯಾಪಾರಿಯಾದ ನೀನು, ಅಷ್ಟೇ ದೊಡ್ಡ ಅವಿಶ್ವಾಸಿಯಾಗಿಯೂ ಇರುವೆಯೆಂದು ನಾನು ಊಹಿಸಲಿಲ್ಲಪ್ಪ. ಮೊದಲು ನೀನು ದೇವರ ವಿಶ್ವಾಸವನ್ನು ಪಳಗಬೇಕು" ಎಂದನು.

"ಅದು ತುಂಬಾ ಇದೆ ಸ್ವಾಮಿ. ದಿನಾ ದೇವರ ಪೂಜೆ ಮಾಡಿಯೇ ಬೇರೆ ಕೆಲಸ ಮಾಡುವುದು. ನೀವು ಹೇಳಿದ ಹಾಗೆ ನಡೆಯುವುದರಲ್ಲಿ ಇನ್ನೂ ಒಂದು ತೊಂದರೆಯುಂಟು. ಭಗವಂತನು ನನಗೇನೋ ಪ್ರತ್ಯೇಕ ಸ್ಥಳ ಇರಿಸುತ್ತಾನೆ, ಅಂದುಕೊಳ್ಳಿ, ನಾನು ಯಾವಾಗ ಹೋಗುತ್ತೇನೋ ತಿಳಿಯದು. ಅಷ್ಟರೊಳಗೆ ಮತ್ತೊಬ್ಬರು ಆ ಸ್ಥಳವನ್ನು ಆಕ್ರಮಿಸಿ ಬಿಟ್ಟರೆ ? ನನಗಿಂತ ಮೊದಲು ಸತ್ತವರು ಆ ಕೆಲಸ ಮಾಡಬಹುದಷ್ಟೆ ?" ಎಂದನು ಭದ್ರಯ್ಯ.

ಇದಕ್ಕೇನು ಹೇಳುವುದೆಂದು ಬೋಧಾನಂದನು ಯೋಚಿಸುವಾಗ, ಭದ್ರಯ್ಯ ಮುಂದುವರಿಸುತ್ತ "ಇಲ್ಲಿ ನಾನು ಎಲ್ಲವನ್ನೂ ಸ್ವತಃ ನೋಡಿಕೊಳ್ಳುತ್ತಿದ್ದರೂ ಕೆಲವು ಮೋಸಗಳು ನಡೆದೇ ನಡೆಯುತ್ತವೆ. ಇಂತಹ ವ್ಯವಹಾರಗಳಲ್ಲಿ ದೇವರನ್ನು ಹೇಗೆ ನಂಬಲಿ ? ಆತನ ಹೊರೆ ಬಹಳ ದೊಡ್ಡದು. ಆದ್ದರಿಂದ ನಾನು ಅಲ್ಲಿಗೆ ಹೋದ ಮೇಲೆ ಆತನೊಂದಿಗೆ ಸ್ವತಃ ಮಾತಾಡಿ ನನ್ನ ಸ್ಥಳದ ವಿಷಯ ನಿರ್ಣಯಿಸಿ ಕೊಳ್ಳಬೇಕೆಂದಿದ್ದೇನೆ. ಇಷ್ಟೆಲ್ಲಾ ಗುಟ್ಟು ತಿಳಿಸಿದ ನಿಮಗೆ ತುಂಬಾ ಕೃತಜ್ಞತೆ ಸ್ವಾಮಿ" ಎಂದನು.

"ಒಳ್ಳೇದಪ್ಪ, ನನ್ನ ಧರ್ಮ ಬೋಧೆಗಳು ವಿತಂಡ ವಾದದವರಿಗೆ ಹೇಗೆ ಅರ್ಥವಾಗುವುದೆಂದು ಗೊತ್ತಾಯಿತು. ಸ್ವತಃ ಅಲ್ಲಿಗೆ ಹೋಗಿ ಭಗವಂತನೊಡನೆ ಮಾತಾಡುವೆನೆಂದೆಯಲ್ಲಾ ! ಅಲ್ಲಿಗೆ ಹೋಗಬೇಕಾದರೂ ತಕ್ಕ ಹಾಗೆ ಪುಣ್ಯಕಾರ್ಯ ಮಾಡಬೇಕಷ್ಟೆ ?" ಎಂದನು.

"ಹಾಗೆ ಮಾಡಿದರೂ ಅಲ್ಲಿಗೇ ಹೋಗುವೆನೆಂದು ಹೇಗೆ ನಂಬಲಿ ?" ಎಂದನು ಭದ್ರಯ್ಯ,

ಭದ್ರಯ್ಯನಂತಹ ಮೊಂಡುಬುದ್ಧಿವಂತನನ್ನು ಮಾರ್ಪಡಿಸಲು ಸಾಧ್ಯವಿಲ್ಲವೆಂದುಕೊಂಡು ಬೋಧಾನಂದನು ಅಲ್ಲಿಂದ ಹೊರಟುಹೋದನು.





# ದೈವಜ್ಞನ ಸಲಹೆ

ಒಂದಾನೊಂದು ಗ್ರಾಮದಲ್ಲಿ ರಾಮಯ್ಯನೆಂಬೊಬ್ಬ ಆಸ್ತಿವಂತನಿದ್ದನು. ಯಾವ ಚಿಂತೆಯೂ ಇಲ್ಲದ ಅವನಿಗೆ ಒಂದು ಚಿಂತೆ ಶುರುವಾಗಿ ಕ್ರಮೇಣ ದೊಡ್ಡದಾಗುತ್ತಾ ಹೋಯಿತು. ಒಮ್ಮೆ ತಲೆ ನೋವೆಂದು ಮಲಗಿದ ಅವನ ಹೆಂಡತಿ, ಹೊಟ್ಟೆ ನೋವು, ಸೊಂಟನೋವು, ಕಾಲುನೋವು ಎನ್ನುತ್ತ ಗಟ್ಟಿಯಾಗಿ ಹಾಸಿಗೆ ಹಿಡಿದು ಬಿಟ್ಟಳು. ಅದೇನು ರೋಗವೆಂದು ವೈದ್ಯರಿಗೆ ಗೊತ್ತಾಗಲಿಲ್ಲ. ಏನೇನೋ ರೋಗ ಲಕ್ಷಣಗಳನ್ನು ನೋಡಿ ಊಹಿಸಿಕೊಂಡು, ಎಂತೆಂತಹ ಔಷಧಗಳನ್ನು ಕೊಟ್ಟರೂ ಅವೆಲ್ಲಾ ನಿರುಪಯೋಗವೇ ಆದುವು. ಗಂಡನಿಗೆ ಇದು ಸಾಮಾನ್ಯ ಚಿಂತೆಯಲ್ಲವಷ್ಟೆ ?

ರಾಮಯ್ಯನ ಗ್ರಾಮದ ಹತ್ತಿರದ ಗ್ರಾಮದಲ್ಲಿ ಪ್ರಶ್ನೆಗಳನ್ನು ಹೇಳುವ ದೈವಜ್ಞನೊಬ್ಬನಿದ್ದನು. ತಮ್ಮ ಇಷ್ಟಗಳು ನೆರವೇರದೆ ಹೋದವರಾರಾದರೂ ಆತನ ಹತ್ತಿರ ಹೋಗಿ ದಕ್ಷಿಣೆ ತಾಂಬೂಲಗಳನ್ನು ಕೊಟ್ಟು ಕುಳಿತುಕೊಂಡರೆ, ಆ ದೈವಜ್ಞನು ಅವರು ಬಂದ ಕೆಲಸವನ್ನು ತಿಳಿದುಕೊಂಡು, ಬಂದವರ ಕೆಲಸ ಅನುಕೂಲವಾಗುವ ಮಾರ್ಗವನ್ನು ಹೇಳುವನು. ಆತನ ಹತ್ತಿರ ಒಂದೇ ಒಂದು ತೊಂದರೆ. ಅವನು ಹೇಳುವುದನ್ನು ಜಾಗರೂಕತೆಯಿಂದ ಕೇಳಿ ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಸರಿಯಾಗಿ ಕೇಳಿಸಿಕೊಳ್ಳದೆ ಹೋದರೂ, ಕೇಳಿದುದನ್ನು ಅರ್ಥಮಾಡಿಕೊಳ್ಳದೆ ಪ್ರಶ್ನೆ ಮಾಡಿದರೂ ಅವನು ರೌದ್ರಾಕಾರದಿಂದ ಉರಿದು ಬಿದ್ದು, ಇದಿರಾಳಿ ಎಂಥವನೆಂಬ ಪರಿವೆ ಕೂಡಾ ಇಲ್ಲದೆ ಬೈದು ಬಿಡುವನು. ಅದನ್ನು ಸಹಿಸಿಕೊಂಡು ಸುಮ್ಮನಿದ್ದರೆ, ಆಮೇಲೆ ಅವನು ಶಾಂತನಾಗಿ ತಾನು ಹೇಳುವುದನ್ನು ವಿವರವಾಗಿ ಅರ್ಥವಾಗುವ ಹಾಗೆ ಹೇಳುತ್ತಾನೆ.

ಈ ಕಾರಣದಿಂದ ಸ್ವಲ್ಪ ಸ್ವಾಭಿಮಾನಶಾಲಿಗಳಾದವರು ಆತನ ಹತ್ತಿರ ಹೋಗಲು ಇಷ್ಟಪಡುವುದಿಲ್ಲ. ಕೆಲಸವಾಗುವುದೇ ಮುಖ್ಯವೆಂದಿರುವವರು ಮಾತ್ರ, ಅವನ ಬಾಯಿಯಿಂದ ಹೊರಡುವ ನಾಲ್ಕು ಬೈಗುಳುಗಳನ್ನು ತಿನ್ನಲು ಸಿದ್ಧರಾಗಿ ಹೋಗುತ್ತಾರೆ.

ರಾಮಯ್ಯನಿಗೆ ಆ ದೈವಜ್ಞನ ಬಳಿಗೆ ಹೋಗಬೇಕೆಂದು ಅನೇಕ ಬಾರಿ ಆಲೋಚನೆ ಬಂದಿತ್ತು, ಆದರೆ ಸ್ವಾಭಿಮಾನ ಉಳ್ಳವನಾದುದರಿಂದ, ಅವನಿಂದ







ಅವಮಾನ ಹೊಂದಬೇಕಾಗಿ ಬರುತ್ತದೇನೋ ಅಂದು ಕೊಂಡು ಸಂಕೋಚಗೊಂಡು ಹಾಗೆಯೇ ದಿನಗಳೆಯುತ್ತಾ ಬಂದಿದ್ದನು.

ಆದರೆ ತನ್ನ ಹೆಂಡತಿಯ ರೋಗವು ಕಡಿಮೆಯಾಗಬೇಕಾದರೆ ಆ ದೈವಜ್ಞನ ಬಳಿಗೆ ಹೋಗದೆ ತಪ್ಪಲಾರದೆಂದು ಅವನಿಗೆ ತೋರಿತು. ಆದುದರಿಂದ ಅವನು ಒಂದು ಒಳ್ಳೆಯ ದಿನ ನೋಡಿ, ದಕ್ಷಿಣೆ ತಾಂಬೂಲಗಳನ್ನಿಟ್ಟುಕೊಂಡು ಆ ದೈವಜ್ಞನನ್ನು ನೋಡಲು ಹೋದನು.



ದೈವಜ್ಞನು ಬೆಳ್ಳಗಿನ ಗಡ್ಡಮೀಸೆಗಳಿಂದ ಒಳ್ಳೆಯ ತೇಜಸ್ಸಿನಿಂದ ದರ್ಶನವಿತ್ತನು. ರಾಮಯ್ಯನು ದಕ್ಷಿಣೆ ತಾಂಬೂಲಗಳನ್ನು ಅವನ ಮುಂದಿಟ್ಟು ಕುಳಿತ ಕೂಡಲೇ ಅವನು, "ನಿನ್ನ ಹೆಸರು ರಾಮಯ್ಯ. ನಿನ್ನ ಹೆಂಡತಿ ಹಾಸಿಗೆ ಹಿಡಿದಿದ್ದಾಳೆ. ಅವಳು ಹೇಗೆ ಗುಣಮುಖಳಾಗುವಳೋ ಎಂಬುದನ್ನು ತಿಳಿದುಕೊಳ್ಳಬೇಕೆಂದು ಬಂದಿರುವಿ. ಆದರೂ ನೀನು ಮಹಾ ಅಹಂಕಾರದವನು. ಹೋಗಲಿಬಿಡು, ಬಂದೆಯಲ್ಲ? ಪಾಪ. ನಿಜ ಹೇಳುತ್ತೇನೆ ಕೇಳು. ನೀನು ಪ್ರಕೃತಿ ವಿರುದ್ಧವಾದ ಕಾರ್ಯಗಳನ್ನು ಮಾಡಿರುವಿ. ಸಹಜವಾದ ಪ್ರವಾಹವನ್ನು ತಡೆಗಟ್ಟಿರುವಿ. ಆ ತಡೆಯನ್ನೆಲ್ಲ ತೆಗೆದು ಬಿಡು. ನಿನ್ನ ಹೆಂಡತಿಯ ರೋಗ ಪೂರ್ತಿ ಗುಣವಾಗುತ್ತದೆ. ಮದ್ದು ಮಾತ್ರೆ ಕಷಾಯಿ ಅಂತ ಸುಮ್ಮನೆ ಹಣ ಹಾಳು ಮಾಡಬೇಡ. ಅದರಿಂದ ಕಾಸಿನ ಪ್ರಯೋಜನವೂ ಆಗಲಾರದು. ನಾನು ಹೇಳಿದ್ದು ಅರ್ಥವಾಯಿತೇ ?" ಎಂದನು.

ರಾಮಯ್ಯನು ಒಳಗೊಳಗೆ ಆಶ್ಚರ್ಯಪಡುತ್ತ, ಅರ್ಥವಾಯಿತೆಂಬಂತೆ ತಲೆಯಾಡಿಸಿದನು. ನಿಜಕ್ಕೂ ದೈವಜ್ಞನು ಹೇಳಿದುದೊಂದೂ ರಾಮಯ್ಯನಿಗೆ ಅರ್ಥವಾಗಲೇ ಇಲ್ಲ. ಅರ್ಥವಾಗಲಿಲ್ಲ, ಸ್ವಲ್ಪ ವಿವರಿಸಿರೆಂದರೆ ಹೀನಾಮಾನಾ ಆಗಿ ಬಯ್ಯುವನೇನೋ ಎಂದುಕೊಂಡು ಸುಮ್ಮನೆ ತಲೆಯಾಡಿಸಿ ಮನೆಗೆ ಹಿಂದಿರುಗಿದ್ದನು. ದಾರಿಯುದ್ದಕ್ಕೂ ಅವನ ಮಾತುಗಳನ್ನು ಆಲೋಚನೆ ಮಾಡಿಕೊಳ್ಳುತ್ತಾ ಇದ್ದನು. ದೈವಜ್ಞನು ಹೇಳಿದ ಮಾತುಗಳನ್ನು ಮನನ ಮಾಡಿಕೊಂಡೇ ಇರುವಾಗ, ಅವನಿಗೆ ಒಂದು ಸಂಗತಿ ನೆನಪಿಗೆ ಬಂತು. ಕಳೆದ ವರ್ಷ ರಾಮಯ್ಯನು ತಾನು ಬಲವಂತನಾದುದರಿಂದ, ತನ್ನ ಗದ್ದೆಗಳ ಪಕ್ಕದಲ್ಲಿರುವ ಕಾಲುವೆಗೆ ಅಡ್ಡಕಟ್ಟೆ ಕಟ್ಟಿ, ನೆರೆಯಲ್ಲಿರುವ ದೂಮಪ್ಪನ ಗದ್ದೆಗಳಿಗೆ ನೀರಿಲ್ಲದಂತೆ ಮಾಡಿದ್ದನು. ಅದು ಧರ್ಮ ಪ್ರಕಾರ ತಪ್ಪು ಕೆಲಸವೇ. ಆದುದರಿಂದಲೇ ತನ್ನ ಹೆಂಡತಿಗೆ ರೋಗ ಬಂದಿದೆಯೆಂದು ದೈವಜ್ಞನ ಮಾತಿನ ಅಭಿಪ್ರಾಯವಿರುವಂತೆ ಅವನಿಗೆ ತೋರಿತು.

ಅಂತಲೇ ರಾಮಯ್ಯನು ದೂಮಪ್ಪನನ್ನು ಕರೆಯಿಸಿ, "ನೋಡು ದೂಮಪ್ಪಾ, ಒಂದು ಕಾರಣದಿಂದ ಕಳೆದ ವರ್ಷ ಕಾಲುವೆಯ ನೀರು ಸಿಗದ ಹಾಗೆ ಮಾಡಿ ನಿನಗೆ ಕಷ್ಟಕೊಟ್ಟೆನು. ನೀನು ಕೆರೆಯ ನೀರನ್ನು

ಹಾಯಿಸಿ ಬಹಳ ಕಷ್ಟಪಡಬೇಕಾಯಿತು. ಇನ್ನು ಮೇಲೆ ನಾನು ಹಾಕಿಸಿದ ಕಟ್ಟ ತೆಗೆಸಿ ಬಿಡುತ್ತೇನೆ. ನಿನಗೇನೂ ತೊಂದರೆಯಾಗದು" ಎಂದು ಒಳ್ಳೆಯದ ರಲ್ಲಿ ಹೇಳಿ ಕಳುಹಿಸಿ, ಆಳುಗಳಿಂದ ಕಾಲುವೆಯ ಅಡ್ಡಕಟ್ಟವನ್ನು ತೆಗೆಯಿಸಿದನು.

ಇನ್ನು ಮೇಲೆ ತನ್ನ ಹೆಂಡತಿಗೆ ಗುಣವಾಗುತ್ತ ದೆಂದು ರಾಮಯ್ಯನಿಗೆ ತೋರಿತು. ಆದರೆ ಹಾಗೇನೂ ಆಗಲೇ ಇಲ್ಲ. ಅದರ ಬದಲಿಗೆ ಅವಳು ಇನ್ನಿಷ್ಟು ಕ್ಷೀಣ ದಶೆಗೆ ಇಳಿಯುವಂತೆ ಕಂಡಿತು.

ದೈವಜ್ಞನು ಹೇಳಿದ ಮಾತುಗಳನ್ನು ರಾಮಯ್ಯನು ಮತ್ತೆ ಜ್ಞಾಪ್ತಿಗೆ ತಂದುಕೊಂಡನು. ಸಹಜ ಪ್ರವಾಹಕ್ಕೆ ತಾನಿನ್ನು ಯಾವ ತಡೆ ಹಾಕಿದ್ದೇನೋ ಅವನಿಗೆ ಅರ್ಥವಾಗಲಿಲ್ಲ. ಅದರಲ್ಲಿ ಯಾವುದೋ ಗೂಢಾರ್ಥ ವಿರಬೇಕು. ಅದೇನೆಂದು ಆ ದೈವಜ್ಞನೇ ಬಿಡಿಸಿ ಹೇಳ ಬೇಕು. ಉಪಾಯವಿಲ್ಲದೆ ರಾಮಯ್ಯನು ಮತ್ತೊಂದು ಸಾರಿ ದೈವಜ್ಞನ ಬಳಿಗೆ ದಕ್ಷಿಣೆ ತಾಂಬೂಲ ಒಯ್ದನು.

ದೈವಜ್ಞನು ಅವನನ್ನು ನೋಡಿದಕೂಡಲೇ "ಮತ್ತೆ ಬಂದೆಯಾ ? ನೀನು ದೊಡ್ಡ ದುರಹಂಕಾರಿ ಎಂದು ಮೊದಲೇ ಹೇಳಿದೆನಷ್ಟೆ ? ನಾನು ಹೇಳಿದ ಸಲಹೆ ನಿನಗೆ ಅರ್ಥವಾಗಲಿಲ್ಲ. ಅರ್ಥವಾಗುವಂತೆ ಹೇಳಿರೆನ್ನಲು ನಿನ್ನ ಅಭಿಮಾನ ಅಡ್ಡಬಂದು ಅರ್ಥವಾಯಿತೆಂದು ಸುಮ್ಮನೆ ತಲೆಯಾಡಿಸಿದೆ, ಹೌದಾ ? ಹೇಳುತ್ತೇನೆ ಕೇಳು. ನಿನ್ನ ಈ ದುರಹಂಕಾರ ದಿಂದಲೇ ನೀನು ನಿನ್ನ ಹೆಂಡತಿಯನ್ನು ತೌರು ಮನೆಗೆ ಹೋಗಕೂಡದೆಂದು ಕಟ್ಟು ಮಾಡಿರುವಿ. ಹೆಂಗುಸರಿಗೆ ಹುಟ್ಟಿದ ಮನೆಯಲ್ಲಿರುವ ಪ್ರೇಮವು ಸಹಜ ಪ್ರವಾಹದಂತಹುದು. ಏನೋ ಅಲ್ಪ ಕಾರಣ ದಿಂದ ನೀನು ಆ ಪ್ರವಾಹವನ್ನು ತಡೆದು ಕಟ್ಟ ಹಾಕಿರುವಿ. ಅದು ಮೊದಲು ನಿನ್ನ ಹೆಂಡತಿಯ ಆರೋಗ್ಯ ಕೆಟ್ಟಿದೆ. ಆ ಮನೋವ್ಯಾಧಿ ಕ್ರಮವಾಗಿ ಬೆಳೆದು ಅವಳು ಹಾಸಿಗೆ ಹಿಡಿದಿದ್ದಾಳೆ. ಹೋಗಿ ನಿನ್ನ ಅತ್ತೆಮಾವಂದಿರಿಗೆ ಕ್ಷಮಾಪಣೆ ಹೇಳಿ ಅವರನ್ನು ಕರೆದುಕೊಂಡು ಬಾ. ಅವರನ್ನು ನೋಡಿಬಿಟ್ಟರೆ ನಿನ್ನ ಹೆಂಡತಿ ಬೇಗನೇ ಗುಣಮುಖಿಳಾಗುತ್ತಾಳೆ. ಅಷ್ಟು ಮಾಡು, ಹೋಗು" ಎಂದನು.

ಈ ಮಾತುಗಳ ಪೆಟ್ಟಿನಿಂದ ರಾಮಯ್ಯನ ಅಹಂಕಾರ ಪೂರ್ತಿ ಇಳಿದುಹೋಯಿತು. ಅವನು ಆ ದಿನವೇ ಹೊರಟು ಅತ್ತೆಯ ಊರಿಗೆ ಹೋಗಿ ಅತ್ತೆಮಾವಂದಿರೊಂದಿಗೆ ಬಹಳ ಒಳ್ಳೆಯ ರೀತಿಯಲ್ಲಿ ಮಾತಾಡಿ ಅವರನ್ನು ಕರೆದುಕೊಂಡು ಬಂದನು. ಅವರನ್ನು ನೋಡಿದ ಕ್ಷಣದಿಂದಲೇ ರಾಮಯ್ಯನ ಹೆಂಡತಿಯಲ್ಲಿ ಬದಲಾವಣೆ ಪ್ರಾರಂಭವಾಯಿತು. ಕೆಲವು ದಿನಗಳಲ್ಲಿ ಅವಳು ಎದ್ದು ತಿರುಗುತ್ತ ಪೂರ್ಣಾರೋಗ್ಯ ಪಡೆದಳು.






ಶ್ರೀಮತಿಯ ಸ್ವಯಂವರದ ಸಮಾಚಾರ ಕೇಳಿ ಅನೇಕ ದೇಶಗಳ ರಾಜರೂ, ಮೂರು ಲೋಕಗಳ ಪ್ರಮುಖರೂ ಬಂದರು. ವಿಷ್ಣುವಿನ ವೇಷದಲ್ಲಿ ನಾರದನೂ ಬಂದು ಸ್ವಯಂವರ ಮಂಟಪವನ್ನು ಪ್ರವೇಶಿಸಿದನು.

ಅವನನ್ನು ನೋಡಿದ ಕೂಡಲೇ ಅಲ್ಲಿದ್ದವರೆಲ್ಲಾ ಘೊಳ್ಳನೆ ನಕ್ಕರು. ತನ್ನ ಮುಖವು ಕೋತಿಯದಾಗಿದೆ ಎಂಬುದನ್ನು ಆಗ ತಾನೇ ತಿಳಿದುಕೊಂಡು ನಾರದನು ಅವಮಾನದಿಂದ ಕುಂದಿಹೋದನು. ಅಷ್ಟೇ ಅಲ್ಲದೆ ವಿಷ್ಣುವಿನ ಮೇಲೆ ಬಹಳ ಕೋಪ ಬಂದಿತು ಅವನಿಗೆ.

ಶ್ರೀಮತಿ ವಿಷ್ಣುವನ್ನು ಧ್ಯಾನಿಸಿದಳು. ವಿಷ್ಣು ಅವಳ ಮುಂದೆ ಸಾಕ್ಷಾತ್ಕಾರವಾಗಿ ನಿಂತನು. ಶ್ರೀಮತಿ ವಿಷ್ಣುವಿನ ಕೊರಳಿಗೆ ಮಾಲೆ ಹಾಕಿ ವರಿಸಿದಳು. ವಿಷ್ಣುವೂ ಅವಳ ಕೊರಳಿಗೆ ಮಾಲೆ ಹಾಕಿದನು. ಸ್ವಯಂವರದ ಕಾರ್ಯಗಳೆಲ್ಲ ಮುಗಿದ ಮೇಲೆ ವಿಷ್ಣು ಶ್ರೀಮತಿಯನ್ನು ಕರೆದುಕೊಂಡು ವೈಕುಂಠಕ್ಕೆ ಹೋದನು. ಪ್ರತಿಮೆಗಳ ಹಾಗೆ ನೋಡುತ್ತಾ ನಿಂತ ನಾರದಪರ್ವತರಿಗೆ ಪೂರ್ತಿ ನಿರಾಶೆಯಾಯಿತು.

ನಾರದನು ವಿಷ್ಣುವಿನ ಮೇಲೆ ಮತ್ತಿಷ್ಟು ಕೋಪದಿಂದ, ಪರ್ವತನನ್ನು ತನ್ನೊಂದಿಗೆ ಸರಿಪಡಿಸಿಕೊಂಡು ಅಂಬರೀಷನ ಮೇಲೆ ಕೋಪವನ್ನು ಕಾರಿದನು. ಶ್ರೀಮತಿಯನ್ನು ತಮಗಿಬ್ಬರಲ್ಲಿ ಒಬ್ಬರಿಗೆ ಕೊಡುವುದನ್ನು ಬಿಟ್ಟು, ವಿಷ್ಣುವಿಗೆ ಕೊಟ್ಟುದರಿಂದ ಅಂಬರೀಷನನ್ನು ನಾಶಮಾಡುವೆವೆಂದು ಇಬ್ಬರೂ ಶಪಿಸಲು ಸಿದ್ಧರಾದರು.

ಆಗ ವಿಷ್ಣುಚಕ್ರವು ಅವರಿಗೆ ಅಡ್ಡ ಬಂದು, ಕಡೆಗೆ ಅವರಿಬ್ಬರನ್ನೂ ಬಿಡದೆ ಓಡಿಸಿಕೊಂಡು ಹೋಗ ತೊಡಗಿತು.

ಪರ್ವತ, ನಾರದರಿಬ್ಬರೂ ವೈಕುಂಠಕ್ಕೇ ಓಡಿದರು. ಅಲ್ಲಿ ಶ್ರೀಮತಿಯೊಂದಿಗಿರುವ ವಿಷ್ಣುವನ್ನು ನೋಡಿ, ನಾರದನು ಇನ್ನಿಷ್ಟು ಕೋಪದಿಂದ, "ನೀನು ಕೂಡಾ ನಿನ್ನ ಶ್ರೀಮತಿಯನ್ನು ಅಂದರೆ ನಿನ್ನ ಪತ್ನೀರತ್ನವನ್ನು ಅಗಲಿ ವಿಲಪಿಸುವಂತಾಗಲಿ. ನನ್ನನ್ನು ಕೋತಿಯ



## ೧೦. ದುರ್ವಾಸ ಗರ್ವಭಂಗ





ಮುಖದವನಾಗಿ ಮಾಡಿದೆಯಷ್ಟೆ? ನಿನಗೂ ಕೋತಿಗಳ ಸಹಾಯವೇ ಬೇಕಾಗಿ ಬರಲಿ!" ಎಂದು ವಿಷ್ಣುವನ್ನು ಶಪಿಸಿದನು.

ನಾರದನ ಶಾಪವನ್ನು ಕೇಳಿ ವಿಷ್ಣು ಮಂದಹಾಸ ಬೀರಿದನು, ಶ್ರೀಮತಿ ಲಕ್ಷ್ಮೀದೇವಿಯಾಗಿ ನಿಜರೂಪದಲ್ಲಿ ಕಾಣಿಸಿದಳು. ಅದನ್ನು ನೋಡಿ ನಾರದ ಪರ್ವತರು ಬಹಳವಾಗಿ ನಾಚಿಕೊಂಡು ಲಕ್ಷ್ಮೀನಾರಾಯಣರ ಮುಂದೆ ಅಡ್ಡ ಬಿದ್ದು, ತಾವು ಶಪಿಸಿದುದಕ್ಕಾಗಿ ಪಶ್ಚಾತ್ತಾಪಪಟ್ಟರು.

ನಾರದನು ವಿಷ್ಣುವಿನ ಪಾದವನ್ನು ಕಣ್ಣೀರಿನಿಂದ ತೊಳೆಯುತ್ತ ವಿಷ್ಣುವನ್ನು ಶಪಿಸಿದುದಕ್ಕಾಗಿ ಅಳಲಿಕ್ಕೆ ತೊಡಗಿದನು. ವಿಷ್ಣು ಅವನ ತಲೆಯನ್ನು ತಡವುತ್ತ, "ನಾರದಾ, ತ್ರಿಕಾಲಜ್ಞಾನಿಯಾದ ನೀನು ನಡೆದುದನ್ನು ನೆನೆದು ದುಃಖಿಸುವುದೆಂದರೇನಿದು? ನಿನ್ನ ಬಾಯಿಯಿಂದ ಅಮೋಘವಾದ ವಾಕ್ಯಗಳೇ ಹೊರಟಿವೆ. ಅದು ನನ್ನ ಸಂಕಲ್ಪಕ್ಕೆ ತಕ್ಕ ಹಾಗೆಯೇ ಆಗಿದೆ. ನನ್ನ ರಾಮಾವತಾರದಲ್ಲಿ ಹಾಗೆಯೇ ಆಗಬೇಕು. ಅದು ಲೋಕಕಲ್ಯಾಣಕ್ಕಾಗಿಯೇ" ಎಂದು ಹೇಳಿದನು.

ಆಗಿನಿಂದಲೂ ಅಂಬರೀಷನಿಗೆ ಯಾರಿಂದಲೂ ಎಂತಹ ಕೇಡೂ ಬಾರದಂತೆ, ವಿಷ್ಣುಚಕ್ರವು ನಿರಂತರ ಅವನ ರಕ್ಷಣೆ ಮಾಡಿಕೊಂಡಿರುವಂತೆ ವಿಷ್ಣುವಿನ ಅನುಗ್ರಹವಾಗಿತ್ತು.

ಹಾಗಿರುವಾಗ ಒಮ್ಮೆ ಅಂಬರೀಷನಿಗೆ ದುರ್ವಾಸ ಮುನಿಯಿಂದ ಸಂಧಿಗ್ಧತೆಯುಂಟಾಯಿತು. ದುರ್ವಾಸನಿಗೆ ತಪೋಬಲದ ಗರ್ವವು ತುಂಬ ಹೆಚ್ಚು, ಗರ್ವದೊಂದಿಗೆ ತಾಮಸಗುಣವೂ ಇದ್ದೇ ಇರುತ್ತದೆ. ಒಂದು ದಿನ ಅವನು ತನ್ನ ಆಶ್ರಮದಿಂದ ಹೊರಡಲಿರುವಾಗ, ನಾರದನು ಆನಂದಪಾರವಶ್ಯತೆಯಲ್ಲಿ ಕಣ್ಣು ಮುಚ್ಚಿಕೊಂಡು ವಿಷ್ಣು ಸಂಕೀರ್ತನೆಯನ್ನು ಹಾಡುತ್ತ ಮಂದವಾದ ನೃತ್ಯದ ನಡಿಗೆಯಲ್ಲಿ ದುರ್ವಾಸನ ಇದಿರಿಗೆ ಬಂದನು.

"ಓಹೋ! ನಾರದಾ! ಕಲಹಭೋಜನದಿಂದ ಹೊಟ್ಟೆ ತುಂಬಿ ಹೋದ ಹಾಗಿದೆ! ಬಹಳ ಆನಂದ ಪಾರವಶ್ಯತೆಯಲ್ಲಿ ತೇಲುತ್ತಿರುವೆಯೇಕೋ?" ಎಂದನು ದುರ್ವಾಸ.

ನಾರದನು ಕಣ್ಣು ತೆರೆದು ಬಗ್ಗಿ ಬಗ್ಗಿ ನಮಸ್ಕಾರ ಮಾಡುತ್ತ, "ದುರ್ವಾಸ ಮಹರ್ಷಿಗಳಿಗೆ ನಮಸ್ಕಾರ. ಕಲಹಭೋಜನವೇನೂ ಸಿಕ್ಕದೆ ಉಪವಾಸದಲ್ಲಿದ್ದೇನೆ ಬಿಡಿ. ವಿಷ್ಣುಭಕ್ತಿ ತತ್ಪರನಾದವನಿಗೆ ಅಂತಹ ಮಹಾ ವಿಷ್ಣು ಭಕ್ತರನ್ನು ನೋಡಿದಾಗ ಪರಮಾನಂದ ಉಕ್ಕುತ್ತಾ ಇರುತ್ತದೆ. ಅಂಬರೀಷನನ್ನು ನೋಡಿ ಹೀಗೆ ಬರುತ್ತಿದ್ದೇನೆ. ಅಹಾ! ಏನು ವಿಷ್ಣುಭಕ್ತಿ ಅವನದು! ಭಕ್ತಿಯಲ್ಲಿ ಅವನನ್ನು ಮೀರಿಸಿದವರನ್ನು ನಾ ಕಾಣೆ!" ಎಂದು ಮತ್ತೊಂದುಸಾರಿ ಬಾಗಿ ಪ್ರಣಾಮ ಮಾಡಿದನು.

"ಅಷ್ಟು ದೊಡ್ಡ ವಿಷ್ಣುಭಕ್ತನೇ ಅಂಬರೀಷ?" ಎಂದನು ದುರ್ವಾಸ.






"ಸಂದೇಹವೇನಿದೆ? ಅವನು ವಿಷ್ಣುವಿನ ಅನುಗ್ರಹ ಪಡೆದ ರಾಜರ್ಷಿಸತ್ತಮನು. ದ್ವಾದಶೀ ವ್ರತವೇ ಅವನ ಪ್ರಾಣ" ಎಂದನು ನಾರದ.

"ಏನಾಯಿತು ನಿನಗೆ? ಸಾಮಾನ್ಯ ರಾಜನನ್ನು ಅಳತೆ ಮೀರಿ ಹೊಗುಳುತ್ತಿರುವೆ?" ಎಂದನು ದುರ್ವಾಸ.

"ಅವನನ್ನು ನೋಡಿದರೆ ನಿಮಗೆ ತಿಳಿಯುತ್ತದೆ, ಹೊಗಳಿಕೆ ಅಲ್ಲವೆಂದು. ನಿಮ್ಮಂತಹ ಮಹರ್ಷಿಗಳು ಅವನ ಸದನವನ್ನು ಪಾವನಮಾಡುವುದರಿಂದ ಅವನ ಜನ್ಮಧನ್ಯವಾಗುತ್ತದೆ. ಚರಿತಾರ್ಥನಾಗಿ ಇನ್ನಿಷ್ಟು ಸ್ತುತ್ಯನಾಗುತ್ತಾನೆ. ಆಮೇಲೆ ನೀವೇ ಅವನನ್ನು ನನಗಿಂತ ಹೆಚ್ಚೇ ಹೊಗಳುವಿರಿ!" ಎಂದು ಹೇಳಿ ನಾರದನು ನಾರಾಯಣ ನಾಮಸ್ಮರಣೆ ಮಾಡುತ್ತಾ ತನ್ನ ದಾರಿ ಹಿಡಿದು ಸಾಗಿಹೋದನು.

ನಾರದನ ಮಾತುಗಳು ದುರ್ವಾಸನನ್ನು ಕೆರಳಿಸಿಬಿಟ್ಟಿತು. ಆ ದಿನ ದ್ವಾದಶಿಯಾದುದರಿಂದ, ಹಾಗಾದರೆ ಅವನ ಸತ್ವ ನೋಡಿ ಬಿಡೋಣವೆಂದು ಅಂಬರೀಷನ ಬಳಿಗೇ ಹೊರಟನು.

ಮುಂಚಿನ ದಿನ ಏಕಾದಶೀ ವ್ರತವನ್ನು ಉಪವಾಸದಲ್ಲಿ ಮುಗಿಸಿ, ದ್ವಾದಶಿಯ ದಿನ ಪಾರಣೆ ಮಾಡಿ ವ್ರತಸಮಾಪ್ತಿ ಮಾಡಲು ಅಂಬರೀಷನು ಸಿದ್ಧನಾಗುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಅತಿಥಿಯಾಗಿ ಬಂದ ದುರ್ವಾಸನನ್ನು ನೋಡಿ ಅಂಬರೀಷನು, ಪರಮಾನಂದಭರಿತನಾಗಿ ಆದರದಿಂದ ಸ್ವಾಗತ ಹೇಳಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಭೋಜನಕ್ಕೆ ಆಹ್ವಾನಿಸಿದನು.

ದುರ್ವಾಸನು ನದಿಯಲ್ಲಿ ಸ್ನಾನಮಾಡಿ ಬರುವೆನೆಂದು ಹೇಳಿ ಹೋದನು. ಹೋದವನು ಬಹಳ ಹೊತ್ತಾದರೂ ತಿರುಗಿ ಬರಲಿಲ್ಲ, ದ್ವಾದಶಿಯ ಘಳಿಗೆಗಳು ಮಿಂಚಿ ಹೋಗುವುದರೊಳಗೆ ಪಾರಣೆಯೂ ಅದನ್ನನುಸರಿಸಿ ಭೋಜನವೂ ಮುಗಿಯಬೇಕಿತ್ತು. ತಪ್ಪಿದರೆ ವ್ರತಭಂಗದ ದೋಷ. ಹಾಗೆಂದು ಅತಿಥಿಯನ್ನು ಬಿಟ್ಟು ಭೋಜನ ಮಾಡಿದರೂ ಮಹಾಪಚಾರವೇ! ಅಂಬರೀಷನು ಧರ್ಮಸಂಕಟದಲ್ಲಿ ಸಿಕ್ಕಿಬಿದ್ದನು.

ಆಗ ಧರ್ಮಸೂಕ್ಷ್ಮಗಳನ್ನು ಅರಿತ ಹಿರಿಯರು ಅಂಬರೀಷನೊಂದಿಗೆ, "ಆ ಘಳಿಗೆ ಮೀರುವುದರೊಳಗೆ ಸ್ವಲ್ಪ ತೀರ್ಥವನ್ನು ಸೇವಿಸಿ ಬಿಟ್ಟರೆ ಪಾರಣೆಯಾದಂತಾಗಿ ವ್ರತಭಂಗವಾಗದು. ಅತಿಥಿಯನ್ನು ಬಿಟ್ಟು ಭೋಜನ ಮಾಡಿದಂತೆಯೂ ಆಗದು. ಆಮೇಲೆ ಅತಿಥಿಯೊಂದಿಗೆ ಸಾವಕಾಶವಾಗಿ ಭೋಜನ ಮಾಡಬಹುದು" ಎಂದರು.

ಹಾಗೆಯೇ ಅಂಬರೀಷನು ತೀರ್ಥಪಾರಣೆ ಮಾಡಿದನು.

ದ್ವಾದಶಿ ಹೋಗಿ ತ್ರಯೋದಶಿ ಕಾಲಿಟ್ಟ ಘಳಿಗೆಯಲ್ಲಿ, ದುರ್ವಾಸನು ಅವಸರವಸರವಾಗಿ ಬಂದು, ಪಾರಣೆಯಾದುದನ್ನು ತಿಳಿದು, ಕೋಪ



ದಿಂದ ಹಲ್ಲು ಕಡಿಯುತ್ತ, ಜಟಾಜೂಟವನ್ನು ಬಿಚ್ಚಿ ಕೊಡರಿಕೊಳ್ಳುತ್ತ ಕೋಪಮೂರ್ತಿಯಂತೆ ಅಂಬರೀಷನನ್ನು ದುರುದುರು ಕಣ್ಣು ತಿರುಗಿಸಿ ನೋಡುತ್ತ ನಿಂತನು.

"ಅಂಬರೀಷಾ ! ಓ ರಾಜಾಧಮಾ ! ದೊಡ್ಡ ವಿಷ್ಣುಭಕ್ತನೆಂಬ ಗರ್ವದಲ್ಲಿ ಅತಿಥಿಧರ್ಮಕ್ಕೆ ಅಪಚಾರ ಮಾಡುವಿಯಾ ? ನನಗೆ ಅವಮಾನ ಮಾಡಬೇಕಾದರೆ ನಿನಗೆಷ್ಟು ಧೈರ್ಯ ! ನಾನು ಯಾರೆಂದು ಗೊತ್ತಿಲ್ಲವೇನು ? ನನ್ನ ಹೆಸರು ಕೇಳಿದರೆ ಮೂರು ಲೋಕಗಳೂ, ಮುಮ್ಮೂರ್ತಿಗಳೂ ಹೆದರಲೇಬೇಕು, ನನ್ನ ಶಾಪಕ್ಕೆ ಇದಿರೇ ಇಲ್ಲ! ನೀನು ದುರ್ಮರಣದ ಪಾಲಾಗುವಿ !" ಎಂದು ಹುಂಕರಿಸುವ ದುರ್ವಾಸನ ಪಾದಗಳ ಮೇಲೆ, ಅಂಬರೀಷನು ತಲೆವಾಗಿಸಿ,

"ಋಷೀಶ್ವರಾ, ದ್ವಾದಶೀ ವ್ರತ ಹಿಡಿದ ನಾನು ವ್ರತಭಂಗವಾಗದಿರಲಿಕ್ಕಾಗಿ ತೀರ್ಥಪಾರಣೆ ಮಾತ್ರವೇ ಮಾಡಿದ್ದೇನೆ. ಶಾಂತರಾಗಿ ಯೋಚಿಸಿ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಿದ್ದೇನೆ" ಎಂದನು.

ದುರ್ವಾಸನ ಕೋಪದಲ್ಲಿ ಮನ್ನಿಸುವುದೆಂಬ ಮಾತೇ ಇಲ್ಲ. "ನನ್ನ ತಪಶ್ಶಕ್ತಿ, ನಿನ್ನ ಭಕ್ತಿಗಳಲ್ಲಿ ಯಾವುದು ದೊಡ್ಡದೋ ಸ್ವಯಂ ನೋಡುವಿಯಂತೆ !" ಎಂದು ಹೇಳಿ ಜಟಾಜೂಟವನ್ನು ಸಿಂಹದ ಜೂಲಿನಂತೆ ಆಡಿಸಿದನು.

ದುರ್ವಾಸನ ತಪೋ ಮಹಿಮೆಗಳೆಲ್ಲಾ ಅವನ ಜಡೆಗಳಲ್ಲಿ ಅನೇಕ ಶಕ್ತಿಗಳಾಗಿ ನಿಕ್ಷಿಪ್ತವಾಗಿದ್ದಿತು. ಉದ್ದವಾದೊಂದು ಜಡೆಯನ್ನು ಕಿತ್ತು ಹಿಡಿದುಕೊಂಡು, ಮತ್ತೊಂದು ಕೈಯಲ್ಲಿ ಯೋಗದಂಡವನ್ನು ಎತ್ತಿ ಆಡಿಸುತ್ತ ಜಡೆಯನ್ನು ಕಣ್ಣುಗಳನ್ನು ಕೆಕ್ಕರಿಸಿಕೊಂಡು ಝಳಪಿಸಿದನು.

ಜಡೆಯಿಂದ ಬೆಂಕಿಯ ಕಿಡಿಗಳು ಚಿಮ್ಮುತ್ತ ಕಪ್ಪಗಿನ ಹೊಗೆ ಆಕಾಶಕ್ಕೆದ್ದು ಹರಡ ತೊಡಗಿತು. ಆ ಹೊಗೆಯಿಂದ ಭಯಂಕರಾಕಾರದಲ್ಲಿ ಪರ್ವತದಷ್ಟು ದೊಡ್ಡ ಕೃತ್ಯ ಎಂಬ ಮಹಾಭೂತವು ಆವಿರ್ಭವಿಸಿತು.

ಕೃತ್ಯಭೂತವು ಪ್ರಳಯಭೀಕರವಾಗಿ ದಿಕ್ಕುಗಳು ನಡುಗುವಂತೆ ಗರ್ಜಿಸುತ್ತ, ಅಂಬರೀಷನನ್ನು ಕೊಲ್ಲಲು ಧುಮುಕುವ ಮರುಕ್ಷಣದಲ್ಲಿ, ಅವನಿಗೆ ರಕ್ಷಣೆಯಾಗಿ ವಿಷ್ಣು ಅನುಗ್ರಹಿಸಿದ ಚಕ್ರವು ಜ್ವಾಲೆಗಳನ್ನು ಕಾರುತ್ತ, ರಿವ್ವನೆ ಬಂದು ಕೃತ್ಯಭೂತದ ತಲೆಯನ್ನು ತಾಗಿತು. ಕೃತ್ಯಭೂತವು ಚೂರು ಚೂರಾಗಿ ಆ ಚೂರುಗಳೆಲ್ಲ ಎತ್ತೋ ಹಾರಿ ಮಾಯವಾದುವು. ಅದನ್ನು ನೋಡಿ ದುರ್ವಾಸನ ಸರ್ವಾಂಗವೂ ಬೆವರಿ ನೀರಾಗುತ್ತ, ಗಡಗಡನೆ ನಡುಗತೊಡಗಿದನು.

ಕೃತ್ಯವನ್ನು ನಾಶಮಾಡಿದ ವಿಷ್ಣುಚಕ್ರವು ಅಲ್ಲಿಗೆ ನಿಲ್ಲದೆ ದುರ್ವಾಸನ ಮೇಲೆ ಹೋಯಿತು.

ದುರ್ವಾಸನು ಮತ್ತೊಂದು ಜಡೆಯನ್ನು ಕಿತ್ತು ಬಿಸುಟನು. ಅದರಿಂದ ಹೊರಟು ಅಡ್ಡನಿಂತ ಪರ್ವತ



ಪಾಷಾಣವನ್ನು ಚಕ್ರವು ಪುಡಿಪುಡಿ ಮಾಡಿ ಮತ್ತೆ ದುರ್ವಾಸನ ಕಡೆಗೆ ಬರತೊಡಗಿತು.

ದುರ್ವಾಸ ಋಷಿ ಇನ್ನೊಂದು ಜಡೆಯನ್ನು ಬಿಸುಟನು. ಅದರಿಂದ ಆಕಾಶವೆಲ್ಲ ಮಂಜಿನ ಮೇಘವು ಮುಸುಕಿತು. ಮರುಕ್ಷಣದಲ್ಲಿ ಚಕ್ರದಿಂದ ಹೊರಟ ಜ್ವಾಲೆಯಿಂದ ಅದೆಲ್ಲಾ ಆವಿಯಾಗಿ ಓಡಿಹೋಗಿ ವಾತಾವರಣ ನಿಚ್ಚಳವಾಯಿತು.

ದುರ್ವಾಸನು ಓಡಲು ತೊಡಗಿದನು. ಅವನ ಜಟಾಜೂಟವೆಲ್ಲಾ ಚಕ್ರಜ್ವಾಲೆ ತಗಲಿ ಮಸಿಮಸಿಯಾಗಿ ಹೋಯಿತು. ಈ ವಿಧವಾಗಿ ಅವನ ತಪಶ್ಶಕ್ತಿ ಪೂರ್ತಿ ಹಾರಿಹೋಯಿತು. ತಲೆ ಬೋಳಾಯಿತು. ಕಾಲುಗಳಿಗೆ ಓಡುವುದೇ ಕೆಲಸವಾಯಿತು.

ಮರವೆನ್ನದೆ ಮಡುವೆನ್ನದೆ ಕಾಡುಮೇಡು ನದಿ ಪರ್ವತಗಳನ್ನೆಲ್ಲ ದಾಟುತ್ತ ದುರ್ವಾಸನು ಓಡುತ್ತಿದ್ದಾನೆ. ಚಕ್ರವು ಓಡಿಸುತ್ತಾ ಹೋಗುತ್ತಿದೆ. ಆ ಮುನಿಯನ್ನು ಮೂರು ಲೋಕಗಳಲ್ಲಿಯೂ ತಿರುಗಿಸಿತು ಆ ಚಕ್ರ. ದುರ್ವಾಸನು ಬ್ರಹ್ಮ ಲೋಕಕ್ಕೆ ಓಡುತ್ತಿರಲು, ನಾರದನು ಮುಗುಳು ನಗುತ್ತ ಅವನ ಮುಂದೆ ಬಂದು, "ಯಾರು ದುರ್ವಾಸರೇನಾ ? ಏನಿದು ಓಟ ?" ಎಂದು ಕೇಳಲು, ದುರ್ವಾಸನು ಏನೂ ಹೇಳದೆ, ಹಿಂದೆ ಬರುತ್ತಿರುವ ಚಕ್ರವನ್ನು ತೋರಿಸಿ, ಓಡಿಯೋಡಿ ಹೋಗಿ ಬ್ರಹ್ಮನ ಮುಂದೆ ಬಿದ್ದನು,

"ಇಲ್ಲಿಗೇಕೆ ಬಂದೆ ? ನಾನು ವಿಷ್ಣುವಿನ ನಾಭಿ ಕಮಲದಿಂದ ಹುಟ್ಟಿದವನು. ನಾನೇನು ಮಾಡಲೂ ಸಾಧ್ಯವಿಲ್ಲ. ನಾನು ಚಕ್ರವನ್ನು ತಡೆಯಬಲ್ಲೆನೆಂದು ನೀನು ಹೇಗೆ ಅಂದುಕೊಂಡೆಯೋ ದುರ್ವಾಸಾ"? ಎಂದನು ಬ್ರಹ್ಮ.

"ಆದಿಸೃಷ್ಟಿಕರ್ತನೆಂದು ಬಂದರೆ ಇಷ್ಟೇನಾ ನಿನ್ನ ಪಸೆ ? ನನ್ನನ್ನು ರಕ್ಷಿಸಬಲ್ಲವನು ಆ ಮಹೇಶ್ವರನಿದ್ದಾನೆ ನೋಡುತ್ತೇನೆ. ರುದ್ರನ ಶಕ್ತಿ ಬಹು ದೊಡ್ಡದು." ಎಂದನು ದುರ್ವಾಸ.

"ಹೌದು ಹೌದು. ದುರ್ವಾಸಾ ! ಆ ಮಾತು ನಿಜವೇ. ಫಾಲಾಕ್ಷನ ಬಳಿಗೇ ಹೋಗು. ಎಷ್ಟು ಬೇಗ ಕೈಲಾಸಕ್ಕೆ ಹೋಗುವಿಯೋ ಅಷ್ಟು ಒಳ್ಳೇದು" ಎಂದನು ಬ್ರಹ್ಮ.

ದುರ್ವಾಸನು ಕೈಲಾಸಕ್ಕೆ ಹೋಗಿ ಶಿವನ ಮುಂದೆ ಬಾಗಿ ರಕ್ಷಿಸುವಂತೆ ಮೊರೆ ಇಟ್ಟನು.

"ಅದು ವಿಷ್ಣುವಿನ ಚಕ್ರ. ನಾನಾಗಿ ವಿರೋಧ ತಂದುಕೊಳ್ಳಲು ಹೇಳುವಿಯಾ ? ನನಗೂ ವಿಷ್ಣುವಿಗೂ ತಂಟೆ ತರಲು ಇಲ್ಲಿಗೆ ಬಂದೆಯಾ ? ಮೊದಲು ಇಲ್ಲಿಂದ ಹೋಗಿ ಬಿಡು. ನಿನ್ನ ದುರಹಂಕಾರಕ್ಕೆ ತಕ್ಕ ಫಲ ಅನುಭವಿಸದೆ ತಪ್ಪುವುದೆಂದುಕೊಂಡೆಯಾ ? ಹೋಗಿಬಿಡು ಇಲ್ಲಿಂದ" ಎಂದನು ಶಿವ.

ಕಡೆಗೆ ನಿರುಪಾಯನಾದ ದುರ್ವಾಸನು ವೈಕುಂಠಕ್ಕೆ ಹೋಗಿ ವಿಷ್ಣುವಿನ ಮುಂದೆ ಸಾಷ್ಟಾಂಗ ಬಿದ್ದು



ದೀನಾತಿದೀನನಾಗಿ, ತನ್ನ ಬೆಂಬಿಡದ ಚಕ್ರವನ್ನು ನಿವಾರಿಸಿ ತನ್ನನ್ನು ರಕ್ಷಿಸಬೇಕೆಂದು ಬೇಡಿಕೊಂಡನು.

"ಅಂಬರೀಷನಿಗೆ ರಕ್ಷೆಯಾಗಿ ಎಂದೋ ಈ ಚಕ್ರವನ್ನು ಕೊಟ್ಟಿದ್ದೇನೆ. ಆದುದರಿಂದ ಈಗ ನಾನೇನು ಮಾಡಲೂ ಸಾಧ್ಯವಿಲ್ಲ, ಚಕ್ರವನ್ನು ನಿವಾರಿಸುವಂತೆ ಅಂಬರೀಷನನ್ನೇ ಕೇಳಿಕೋ. ಅದರ ಅಧಿಕಾರ ಅವನಿಗೇ." ಎಂದನು ವಿಷ್ಣು.

ದುರ್ವಾಸನು ಹತಾಶನಾಗಿ ಎದ್ದನು. ಅವನ ಅಹಂಕಾರವು ನಶಿಸಿತು. ಅವನ ತಲೆ ಅಲ್ಲಲ್ಲಿ ಬೋಳು ಬೋಳಾಗಿತ್ತು. ತಪಶ್ಶಕ್ತಿ ಪೂರ್ತಿ ಹೋಗಿತ್ತು. ಭಕ್ತಿಯ ಮುಂದೆ ತಪಶ್ಶಕ್ತಿ ಯಾವ ಮೂಲೆಗೂ ಸಾಲದೆಂದು ತಿಳಿಯಿತು. ನಿರುಪಾಯನಾಗಿ ದುರ್ವಾಸನು ಅಂಬರೀಷನ ಹತ್ತಿರಕ್ಕೇ ನಿಜವಾದ ಸಾಧುವಾಗಿ ಹೊರಟನು. ಚಕ್ರವು ಶಾಂತವಾಗಿ ಅವನನ್ನು ಅನುಸರಿಸಿಕೊಂಡಿತ್ತು, ದುರ್ವಾಸನು ಅಂಬರೀಷನ ಪಾದಗಳಿಗೆ ಬೀಳಲು ಹೋಗುವಾಗ ಅಂಬರೀಷನು ಹಿಡಿದು ನಿಲ್ಲಿಸಿ, ಚಕ್ರವನ್ನು ವಿರಮಿಸುವಂತೆ ಕೇಳಿಕೊಂಡನು. ಚಕ್ರವು ಹಿಂದಿರುಗಿ ಮಾಯವಾಯಿತು. ಹೀಗೆ ಅಗ್ರಗಣ್ಯರಾದ ವಿಷ್ಣುಭಕ್ತರಲ್ಲಿ ಅಂಬರೀಷನು ಹೆಸರುವಾಸಿಯಾದವನು.

ಸೂರ್ಯವಂಶದ ರಾಜರಲ್ಲಿ ಗಾಧಿ ಎಂಬವನು ಪ್ರಮುಖನಾದವನು. ಗಾಧಿಯ ಕುಮಾರನು ವಿಶ್ವಾಮಿತ್ರ. ಇವನು ಕೃಶಾಶ್ವನ ಹತ್ತಿರ ಧನುರ್ವಿದ್ಯೆಗಳನ್ನು ಕಲಿತನು. ಅನೇಕ ದಿವ್ಯಾಸ್ತ್ರಗಳನ್ನೂ ಹೊಂದಿದನು. ಅಸ್ತ್ರವೇತ್ತನೆಂದರೆ ವಿಶ್ವಾಮಿತ್ರನೇ ಎಂಬಂತೆ ಅವನ ಪಾಂಡಿತ್ಯವಿದ್ದಿತು.

ವಿಶ್ವಾಮಿತ್ರನು ರಾಜ್ಯಪಾಲನೆ ಮಾಡಲು ಪ್ರಾರಂಭಿಸಿದ ಮೇಲೆ, ಒಂದು ಸಾರಿ ಸಪರಿವಾರದೊಂದಿಗೆ ವಸಿಷ್ಠನ ಆಶ್ರಮಕ್ಕೆ ಹೋದನು. ವಸಿಷ್ಠ ಮಹರ್ಷಿ ತನ್ನ ಹೋಮಧೇನುವಿನ ಮಹಿಮೆಯಿಂದ ಅವರಿಗೆಲ್ಲಾ ಬಹು ದೊಡ್ಡ ಔತಣವನ್ನು ಮಾಡಿಸಿ ಸಂತೋಷಪಡಿಸಿದನು.

ಅದನ್ನು ನೋಡಿ ವಿಶ್ವಾಮಿತ್ರನು ಆ ಹೋಮಧೇನುವನ್ನು ರಾಜನಾದ ತನಗೆ ಕೊಟ್ಟು, ಅದಕ್ಕೆ ಪ್ರತಿಯಾಗಿ ತಾನು ಕೊಡುವ ಹತ್ತು ಲಕ್ಷ ಧೇನುಗಳನ್ನು ತೆಗೆದುಕೊಳ್ಳುವಂತೆ ವಸಿಷ್ಠನಿಗೆ ಹೇಳಿದನು. ಏನು ಕೊಟ್ಟರೂ ತನ್ನ ಹೋಮಧೇನುವನ್ನು ಮಾತ್ರ ಕೊಡಲು ಸಾಧ್ಯವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟನು ವಸಿಷ್ಠ.

ವಿಶ್ವಾಮಿತ್ರನು ತನ್ನ ಪರಿವಾರದಿಂದ ಬಲಾತ್ಕಾರವಾಗಿ ಹೋಮಧೇನುವನ್ನು ಕರೆದೊಯ್ಯಲು ನೋಡಿದನು. ವಸಿಷ್ಠನು ತನ್ನ ತಪೋಬಲದಿಂದ ಹೋಮಧೇನುವಿನಿಂದ ಅನೇಕ ಮಂದಿ ಶಬರಯೋಧರನ್ನು ಹುಟ್ಟಿಸಿದನು.

ಆ ಯೋಧರು ವಿಶ್ವಾಮಿತ್ರನ ಪರಿವಾರವನ್ನೆಲ್ಲಾ ಹೊಡೆದು ಬಡಿದು ಓಡಿಸಿ ಬಿಟ್ಟರು.

ರಾಜನ ಶಕ್ತಿಗಿಂತಲೂ ತಪೋಬಲವೇ ಹೆಚ್ಚಿನದೆಂದು ವಿಶ್ವಾಮಿತ್ರನಿಗೆ ಗೊತ್ತಾಯಿತು. ಕೂಡಲೇ ವಿಶ್ವಾಮಿತ್ರನು ರಾಜ್ಯವನ್ನು ವಿಸರ್ಜಿಸಿ, ಅರಣ್ಯಕ್ಕೆ ಹೋಗಿ ಅನೇಕ ವರ್ಷಗಳವರೆಗೆ ದೊಡ್ಡ ತಪಸ್ಸನ್ನು ಮಾಡಿದನು, ತಪಸ್ಸಿನ ಸಾಧನೆಗಳಿಂದ ತಾನು ವಸಿಷ್ಠನಿಗೆ ಸಮಾನನೆನಿಸಿಕೊಂಡನು. ಆಗಿನಿಂದ ವಿಶ್ವಾಮಿತ್ರನು ವಸಿಷ್ಠನಿಗೆ ಬಲವಾದ ಪ್ರತಿಸ್ಪರ್ಧಿಯಾದನು.

ರಾವಣನ ಅನುಚರರಾದ ರಾಕ್ಷಸರು ತಮ್ಮ ತಮ್ಮ ಬಲಗಳೊಂದಿಗೆ ಆರ್ಯಾವರ್ತದ ಮೇಲೆ ಆಗಾಗ ಮುಗಿಬೀಳುತ್ತ, ಋಷಿ ಮುನಿಗಳನ್ನು ಪೀಡಿಸುತ್ತಾ ಇದ್ದರು, ಆಶ್ರಮಗಳನ್ನು ಕಂಡಕಂಡಲ್ಲಿ ಸುಡುತ್ತಾ ಬಂದರು. ವಿಶ್ವಾಮಿತ್ರನು ದೊಡ್ಡದೊಂದು ಯಾಗ ಮಾಡಲು ಹವಣಿಸಿದನು. ಅದು ನಡೆಯದಂತೆ ಮಾರೀಚ, ಸುಬಾಹು ಎಂಬ ರಾಕ್ಷಸ ಪ್ರಮುಖರೂ, ತಾಟಕಿ ಎಂಬ ರಾಕ್ಷಸಿಯೂ ಧ್ವಂಸ ಮಾಡುತ್ತಿದ್ದರು. ವಿಶ್ವಾಮಿತ್ರನಿಗೆ ಯಾಗವನ್ನು ನೆರವೇರಿಸಲು ಸಾಧ್ಯವಾಗದೆ ಹೋಯಿತು.

ತನ್ನ ಯಾಗಭಂಗವನ್ನು ನೋಡಿ ವಿಶ್ವಾಮಿತ್ರನು ಚಿಂತಾಕ್ರಾಂತನಾಗಿ, ಹಿಮಾಲಯ ಪ್ರಾಂತಕ್ಕೆ ಹೋಗಿ ತನ್ನ ಸಿದ್ಧಾಶ್ರಮದಲ್ಲಿ ಧ್ಯಾನಮಗ್ನನಾಗಿ ಕುಳಿತುಕೊಂಡನು.

ಆ ಧ್ಯಾನ ಸಮಾಧಿಯಲ್ಲಿ ಅವನಿಗೆ, ವಿಷ್ಣು ಸೂರ್ಯವಂಶದ ರಘು ಸಂತತಿಯಲ್ಲಿ ಅವತಾರವೆತ್ತಿ ರಾಮನೆಂಬ ಹೆಸರಿನಲ್ಲಿ ಬೆಳೆಯುತ್ತಿರುವುದು ಕಂಡುಬಂತು. ವಿಶ್ವಾಮಿತ್ರನಿಗೆ ಉತ್ಸಾಹವೆದ್ದಿತು. ಲೋಕಕಲ್ಯಾಣಕ್ಕಾಗಿ ರಾಕ್ಷಸರನ್ನು ನಿರ್ಮೂಲಿಸುವವನಿಗೆ ವಸಿಷ್ಠನು ಕಲಿಸಿದ ಶಾಸ್ತ್ರ ವಿದ್ಯೆಗಳಾವುದೂ ಪ್ರಯೋಜನಕ್ಕೆ ಬಾರವು. ಅದಕ್ಕೆ ಮುಖ್ಯವಾಗಿ ಅಸ್ತ್ರಶಸ್ತ್ರಗಳು ತುಂಬಿದ ಧನುರ್ವಿದ್ಯಾಪಾಟವವೇ ಬೇಕು. ರಾಮನಿಗೆ ಅಸ್ತ್ರ ವಿದ್ಯೆಗಳನ್ನು ಉಪದೇಶಿಸುವ ಸಮರ್ಥನು ವಿಶ್ವಾಮಿತ್ರನೊಬ್ಬನೇ!

ಧ್ಯಾನದಲ್ಲಿರುವ ವಿಶ್ವಾಮಿತ್ರನಿಗೆ ಲಕ್ಷ್ಮೀದೇವಿ ಸೀತೆಯಾಗಿ, ಜನಕರಾಜನಿಗೆ ಮಗಳಾಗಿ ಮಿಥಿಲೆಯಲ್ಲಿ ಬೆಳೆಯುತ್ತಿರುವುದೂ ಕಾಣಿಸಿತು. ಸೀತಾ ರಾಮರ ಕಲ್ಯಾಣವೂ ತನ್ನಿಂದ ನಡೆಯಬೇಕಾದುದು ಅವಶ್ಯವೆಂತಲೂ ವಿಶ್ವಾಮಿತ್ರನಿಗೆ ತೋರಿತು.

ಆ ರಾಮನಿಂದಲೇ ನಿಂತು ಹೋದ ತನ್ನ ಯಾಗವೂ ಸುರಕ್ಷಿತವಾಗಿ ಪೂರ್ತಿಯಾಗಬೇಕಾಗಿದೆ. ತನಗೆ ತಿಳಿದಿರುವ ಅಸ್ತ್ರ ವಿದ್ಯೆಗಳೆಲ್ಲವನ್ನೂ ರಾಮನಿಗೆ ಉಪದೇಶ ಮಾಡಿ, ರಾಮನನ್ನು ಅಸ್ತ್ರ ವಿದ್ಯಾ ಕೋವಿದನನ್ನಾಗಿ ಮಾಡಬೇಕಾದ ಬಾಧ್ಯತೆ ತನ್ನದೆಂದು ನಿರ್ಧರಿಸಿ, ವಿಶ್ವಾಮಿತ್ರನು ಧ್ಯಾನ ಸಮಾಧಿಯಿಂದೆದ್ದು, ಅಯೋಧ್ಯೆಯ ದಾರಿ ಹಿಡಿದು ಹೊರಟನು.





# ಅಪೂರ್ವವಿದ್ಯೆ

ಒಂದಾನೊಂದು ಊರಿನಲ್ಲಿ ವರ್ಧನನೆಂಬ ಇಪ್ಪತ್ತು ವಯಸ್ಸಿನ ಯುವಕನಿದ್ದನು. ಅವನಿಗೆ ನನ್ನವರೆನ್ನಲು ಯಾರೂ ಇಲ್ಲ. ಒಂದು ಕಾಲದಲ್ಲಿ ಅವನ ತಂದೆ ತಾಯಿಯರು ಬದುಕಿದ್ದಾಗ ಅವನ ಹೊಟ್ಟೆಗೆ ಯಾವ ಕೊರತೆಯೂ ಇರಲಿಲ್ಲ. ಅವರು ತೀರಿ ಹೋದ ಮೇಲೆ ವರ್ಧನನಿಗೆ ಬದುಕುವ ದಾರಿಯೊಂದು ದೊಡ್ಡ ಸಮಸ್ಯೆಯಾಯಿತು. ಅವನಿಗೆ ಓದು ಬರೆಹ ತಿಳಿಯದು. ಕೆಲಸ ಕಾರ್ಯಗಳೇನಾದರೂ ಮಾಡಲಿಕ್ಕೆ ಮೊದಲಿನಿಂದಲೇ ಅಭ್ಯಾಸವಿರಲಿಲ್ಲ, ಬೆಳೆದ ಮೇಲೆ ಮರ ಬಗ್ಗಲಾರದಷ್ಟೆ? ಹೊಟ್ಟೆ ತುಂಬಲು ಏನಾದರೂ ಮಾಡಿದರೆ ತಾನೇ ? ಏನುತಾನೇ ಮಾಡುವುದು ?

ಅವನು ಹುಟ್ಟಿ ಬೆಳೆದು ಓಡಾಡಿದ ಗ್ರಾಮದ ಸಮೀಪದಲ್ಲಿ ಒಬ್ಬ ಸಿದ್ಧನು ಆಶ್ರಮ ನಿರ್ಮಿಸಿಕೊಂಡು ಬಹಳ ಕಾಲದಿಂದ ಇರುವನು. ಅವನು ದೊಡ್ಡ ಮಹಿಮೆಯುಳ್ಳವನೆಂದು ಎಲ್ಲರೂ ಮಾತಾಡಿಕೊಳ್ಳುತ್ತಿದ್ದರು. ವರ್ಧನನು ಬಹಳ ಸಾರಿ ಅಂತಹ ಮಾತುಗಳನ್ನು ಕೇಳಿದ್ದನು, ಅದನ್ನು ಕುರಿತು ಅವನಿಗೇನೂ ಆಸಕ್ತಿ ಬಂದಿರಲಿಲ್ಲ.

ವರ್ಧನನು ಹುಟ್ಟಿದ ಈ ಇಪ್ಪತ್ತು ವರ್ಷಗಳಲ್ಲಿ ಒಂದು ಸಾರಿ ಕೂಡಾ ಆ ಸಿದ್ಧನ ದರ್ಶನ ಮಾಡಿರಲಿಲ್ಲ. ಈಗ ಅವನಿಗೆ ಊರೊಳಗಿನ ತನ್ನ ಪರಿಸ್ಥಿತಿಯನ್ನು ಆಲೋಚಿಸುವಾಗ, ತನ್ನ ಬದುಕಿನ ಸಮಸ್ಯೆಗೆ ಆ ಸಿದ್ಧನು ಏನಾದರೊಂದು ಪರಿಷ್ಕಾರ ಮಾರ್ಗ ತೋರಿಸಲಾರನೆ? ಎಂಬ ಆಶಾ ಪ್ರಶ್ನೆಯುಂಟಾಯಿತು. ಈ ಆಶೆಗೆ ಉತ್ತರ ತಿಳಿದು ಬಿಡೋಣವೆಂದು ವರ್ಧನನು ಒಂದು ದಿನ ಸಿದ್ಧನ ಆಶ್ರಮಕ್ಕೆ ಹೋದನು.

ಆ ಸಮಯದಲ್ಲಿ ಸಿದ್ಧನು ಧ್ಯಾನಸಮಾಧಿಯಲ್ಲಿದ್ದನು. ಶಿಷ್ಯರು ಆಶ್ರಮಕ್ಕೆ ಬೇಕಾದುದನ್ನು ತರುವ ಕೆಲಸದ ಮೇಲೆ ಎಲ್ಲಿಗೋ ಹೋಗಿದ್ದರು. ವರ್ಧನನು ಸಿದ್ಧನ ಸಮೀಪ ಹೋಗಿ ಒಂದು ಬದಿಯಲ್ಲಿ ಕೈ ಕಟ್ಟಿಕೊಂಡು ನಿಂತನು.

ಸ್ವಲ್ಪ ಹೊತ್ತಿನ ಮೇಲೆ ಸಿದ್ಧನು ಕಣ್ಣು ತೆರೆದು, "ಯಾರು ನೀನು ? ಏನು ಬೇಕು ನಿನಗೆ ?" ಎಂದು ಕೇಳಿದನು.

ವರ್ಧನನು ಕೂಡಲೇ ಮುಂದೆ ಬಂದು ಸಿದ್ಧನಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ತಾನು ಬಂದ ಕೆಲಸವೇ

ಬಿ. ಎ. ರಾವ್



ನೆಂಬುದನ್ನು ಆ ಸಿದ್ಧನೊಂದಿಗೆ ನಿವೇದಿಸಿಕೊಂಡನು. ಸಿದ್ಧನು ಅದನ್ನೆಲ್ಲಾ ಕೇಳಿ ಒಂದು ನಿಮಿಷ ಮೌನವಾಗಿದ್ದು, ಆಮೇಲೆ ವರ್ಧನನನ್ನು ನೋಡಿ, "ಅಪ್ಪಾ, ನಿನಗೆ ನಾನು ಧನವನ್ನು ಕೊಡಲಾರೆನು. ಆದರೆ ನಿನ್ನ ಹೊಟ್ಟೆ ಬಟ್ಟೆಗಳಿಗೆ ಇನ್ನೊಬ್ಬರನ್ನು ಆಶ್ರಯಿಸದೆ, ನೀನೇ ಸ್ವತಃ ಸಂಪಾದಿಸುವಂತಹ ಮಾರ್ಗವೊಂದನ್ನು ಮಾತ್ರ ಹೇಳಬಲ್ಲೆನು. ಆಗಬಹುದೊ? ಅಷ್ಟರಿಂದ ನೀನು ತೃಪ್ತನಾಗಲು ಸಾಧ್ಯವೆ?" ಎಂದು ಕೇಳಿದನು.

"ಅಷ್ಟು ಸಹಾಯ ಸಾಕು ಸ್ವಾಮಿ" ಎಂದನು ವರ್ಧನ ಬಹಳ ಸಂತೋಷದಿಂದ.

"ನಿನಗೊಂದು ವಿದ್ಯೆ ಬರುವ ಹಾಗೆ ಮಾಡುತ್ತೇನೆ. ಅದೇನಂದರೆ. ಭೂಮಿಯ ಅಡಿಯಲ್ಲಿ ಕಬ್ಬಿಣದ ಪೆಟ್ಟಿಗೆ ಮೊದಲಾದ ನಿಧಿನಿಕ್ಷೇಪಗಳಿರುತ್ತವೆ. ಇನ್ನೂ ಏನೇನೋ ಇರುತ್ತವೆ, ಅವೆಲ್ಲಾ ನಿನ್ನ ಕಣ್ಣುಗಳಿಗೆ ಕಾಣುವ ಹಾಗೆ ಮಾಡುತ್ತೇನೆ. ಆದರೆ ಆ ನಿಧಿ ನಿಕ್ಷೇಪಗಳನ್ನು ನೀನು ಸ್ವಂತಕ್ಕೆ ಉಪಯೋಗಿಸುವಂತಿಲ್ಲ. ಈ ವಿದ್ಯೆಯನ್ನು ಪ್ರದರ್ಶಿಸುತ್ತಾ ಇದ್ದರೆ ನಿನಗೆ ನಿಶ್ಚಿಂತೆಯಾಗಿ ಜೀವನ ಸಾಗುತ್ತದೆ ಅದರಲ್ಲಿ ಸಂದೇಹವೇನಿಲ್ಲ" ಎಂದನು ಸಿದ್ಧ.

ತರುವಾಯ ಅವನು ವರ್ಧನನನ್ನು ಕಣ್ಣು ಮುಚ್ಚಲು ಹೇಳಿ ಕಣ್ಣುಗಳಿಗೆ ತನ್ನ ಹತ್ತಿರವಿದ್ದ ದಂಡ, ಕಮಂಡಲುಗಳನ್ನು ತಾಗಿಸಿ, ಏನೋ ಮಂತ್ರವನ್ನು ಅವನ ಕಿವಿಯಲ್ಲಿ ಹೇಳಿದನು. ಆಮೇಲೆ ಕಣ್ಣು ತೆರೆದು ನೋಡುವಂತೆ ಹೇಳಿ, "ಈಗ ನೀನು ನಿಂತಿರುವ ಸ್ಥಳದ ಅಡಿಯಲ್ಲಿ ಏನು ಕಾಣುತ್ತದೆ?" ಎಂದು ಕೇಳಿದನು.

ವರ್ಧನನು ಕೆಳಗೆ ನೋಡಿ, "ಇಲ್ಲಿ ಭೂಮಿ ಪದರು ಪದರುಗಳಾಗಿವೆ. ಅವುಗಳ ಕೆಳಗೆ, ಬಹಳ ಆಳದಲ್ಲಿ ನೀರು ಕಾಣುತ್ತದೆ" ಎಂದನು.

ಸಿದ್ಧನು ತೃಪ್ತಿಯಿಂದ ತಲೆಯಾಡಿಸಿ, "ಸರಿ. ಇನ್ನು ಹೋಗಿ ಬಾ. ಈ ವಿದ್ಯೆಯನ್ನು ಸ್ವಾರ್ಥಕ್ಕೆ ಮಾತ್ರ ಉಪಯೋಗಿಸಬೇಡ. ಹಾಗೆ ಮಾಡಿಬಿಟ್ಟೆ ಎಂದರೆ, ಆ ಒಂದೇ ಸಾರಿಗೆ ಮಾತ್ರ ಇದು ನಿನಗೆ ಉಪಯೋಗವಾಗುತ್ತದೆ, ಆಮೇಲೆ ನಿನ್ನ ಕಣ್ಣುಗಳಿಗೆ ಭೂಮಿಯ ಅಡಿಯಲ್ಲಿರುವ ವಸ್ತುಗಳು ಕಾಣಲಿಕ್ಕೇ ಇಲ್ಲ, ಆ ಶಕ್ತಿ ನಿನ್ನಲ್ಲಿ ಪೂರ್ತಿ ನಶಿಸಿ ಹೋಗುತ್ತದೆ" ಎಂದು ಎಚ್ಚರಿಸಿದನು.

ವರ್ಧನನು ಅವನ ಪಾದಗಳಿಗೆ ನಮಸ್ಕಾರ ಮಾಡಿ, ಅಲ್ಲಿಂದ ಹೊರಟನು. ಅವನಿಗೆ ತನ್ನ ಊರಿಗೆ ಹೋಗಲು ಇಷ್ಟವಿರಲಿಲ್ಲ, ಬೇರೆಲ್ಲಿಗಾದರೂ ಹೋಗೋಣವೆಂದುಕೊಂಡು ನಡೆಯುತ್ತಿದ್ದನು. ಅವನು ಒಂದು ಕಾಡುದಾರಿಯನ್ನು ಹಿಡಿದು ಹೋಗುತ್ತಿರಲು, ಒಂದು ಯಾತ್ರಿಕರ ವೃಂದವು ಅವನಿಗೆ ಇದಿರಾಗಿ ಬರುವುದು ಕಂಡಿತು. ಅವರು ಸಮೀಪಿಸುತ್ತಿರಲು ವರ್ಧನನು ಥಕ್ಕನೆ ದೊಡ್ಡ ದನಿಯಿಂದ, "ಅಲ್ಲೇ ನಿಲ್ಲಿರೋ! ನಿಲ್ಲಿರೋ ಅಲ್ಲೇ"

ಎಂದು ಕೂಗಿಕೂಗಿ ಕೈಸನ್ನೆ ಮಾಡಿದನು. ಅವರೆಲ್ಲ ನಿಂತು ಅವನನ್ನು ಆಶ್ಚರ್ಯದಿಂದ ನೋಡಿದರು. "ಇಲ್ಲಿ ಕೆಸರಿನ ಹಳ್ಳವಿದೆ. ಇನ್ನು ಸ್ವಲ್ಪ ಮುಂದೆ ಬಂದರೆ ನೀವೆಲ್ಲಾ ಆ ಕೆಸರ ಗುಂಡಿಯೊಳಗೆ ಸಿಕ್ಕಿ ಕೊಳ್ಳುತ್ತಿದ್ದಿರಿ !" ಎಂದನು ವರ್ಧನ,

ವರ್ಧನನ ಮಾತು ಕೇಳಿ ಯಾತ್ರಿಕರು ಇನ್ನಷ್ಟು ಆಶ್ಚರ್ಯಪಟ್ಟರು. ಅಲ್ಲಿ ನೆಲದ ಮೇಲೆಲ್ಲಾ ಒಣಗಿದ ತರಗೆಲೆಗಳು ದಟ್ಟವಾಗಿದ್ದುವು. ಕೆಸರಿನ ಹಳ್ಳವಿರುವ ಚಿಹ್ನೆಯೇ ಗೊತ್ತಾಗುತ್ತಿರಲಿಲ್ಲ. ಹಾಗಿರಲು ಅಷ್ಟು ದೂರದಲ್ಲಿರುವವನು ಹಾಗೆ ಹೇಳುವುದರಲ್ಲಿ ಅರ್ಥವಿದೆಯೆ ?

ಯಾತ್ರಿಕರಲ್ಲೊಬ್ಬನು ವರ್ಧನನ್ನು ಹುಚ್ಚನೆಂದು ಎಣಿಸಿಕೊಂಡು, "ಬಾಯಿಗೆ ಬಂದ ಹಾಗೆ ಹರಟು ತ್ತಾನೆ. ಯಾರೋ ತಿರುಕ !" ಎನ್ನುತ್ತ ದುಡುಕುತನ ದಿಂದ ಜೋರಾಗಿ ಮುಂದಡಿ ಇಟ್ಟು, "ಅಯ್ಯೊ !" ಎಂದು ಕೂಗಿ ಕೆಸರಿನಲ್ಲಿ ಹೂತು ಹೋಗ ತೊಡಗಿದನು.

ಅವನೊಂದಿಗಿದ್ದವರು ಗಾಬರಿಯಿಂದ ಅವನ ಕೈ ಗಳನ್ನು ಹಿಡಿದೆಳೆದು ಹೇಗೋ ಪಾರು ಮಾಡಿದರು.

ಈ ಘಟನೆಯಿಂದ ವರ್ಧನನು ಅವರಿಗೆಲ್ಲ ದೇವರ ಹಾಗೆ ಕಂಡನು. ಅವರು ಅವನಿಗೆ ಕೃತಜ್ಞತೆ ಹೇಳಿ ಕೆಲವು ಬೆಳ್ಳಿ ನಾಣ್ಯಗಳನ್ನು ಬಹುಮಾನ ಕೊಟ್ಟು ತಮ್ಮ ದಾರಿ ಹಿಡಿದು ಹೊರಟುಹೋದರು. ತನ್ನ ಜೀವಿತದಲ್ಲಿ ಮೊತ್ತಮೊದಲು ದೊರೆತ ಆ ಹಣವನ್ನು ವರ್ಧನನು ತನ್ನ ದುಸ್ತಿನಲ್ಲಿ ಭದ್ರವಾಗಿ ಕಟ್ಟಿ ಕೊಂಡನು. ಹಾಗೆಯೇ ಅವನು ಮುಂದೆ ಹೋಗುತ್ತಾ ಆ ಕಾಡನ್ನು ದಾಟಿ ಯಾವುದೋ ಒಂದು ಗ್ರಾಮ ವನ್ನು ತಲುಪಿದನು,

ಅಲ್ಲಿ ಒಂದು ಮನೆಯೊಳಗೆ ಹಸುಮಗು ಉಸಿರು ಕಟ್ಟಿ ಅಳುತ್ತಿತ್ತು. ತಾಯಿಯೂ ಅಳುತ್ತಾ ಮಗು ವನ್ನು ಸಮಾಧಾನ ಪಡಿಸಲು ನೋಡುತ್ತಿದ್ದಳು. ತಂದೆಯೂ ಪರಿತಾಪವಾಗಿ ಅಳುದನಿ ಹೊರಡಿಸು ತ್ತಿದ್ದನು. ಬಡತನವೂ ಹಸಿವೆಯ ಕಾಟವೂ ಅವರ ಗೋಳಿಗೆ ಕಾರಣ. ಮನೆಯೊಳಗೆ ಕಾಳೋ ಕಾಸೋ





ಯಾವುದೂ ಇರಲಿಲ್ಲ. ಸಾಲವೂ ಹುಟ್ಟದು. ವರ್ಧನನು ಆ ಮನೆಗೆ ಹೊಕ್ಕು, ತನ್ನ ಹತ್ತಿರವಿದ್ದ ಬೆಳ್ಳಿ ನಾಣ್ಯಗಳನ್ನು ಅವರ ಕಡೆ ನೀಡುತ್ತ, ನೆಲದ ಮೇಲೆ ಕಣ್ಣಿಟ್ಟು, "ಈ ಮನೆಯಲ್ಲಿ ಬಡತನವೆ !" ಎಂದು ಆತ್ಮಾಶ್ಚರ್ಯಪಟ್ಟನು.

ಆ ಶತದರಿದ್ರನ ಮನೆಯ ನಡುವೆ ನೆಲದಡಿ ಯಲ್ಲಿ ಕಂಚಿನ ಬೋಗುಣಿ ತುಂಬಾ ಚಿನ್ನದ ನಾಣ್ಯ ಗಳಿರುವುದೆಂದು ಅವನಿಗೆ ಕಂಡಿತು.

ವರ್ಧನನು ಬಡವನೊಂದಿಗೆ "ನಿಮ್ಮ ನಡು ಮನೆಯಲ್ಲಿ ಲಕ್ಷ್ಮಿ ನಾಟ್ಯವಾಡುತ್ತಿದ್ದರೆ, ಹೆಂಡತಿ ಮಕ್ಕಳ ಹಸಿವಿನ ಬಾಧೆ ತೀರಿಸಲಾಗದೆ ಹೋಗುವು ದೆಂದರೇನಿದು ? ಏಳೇಳಿ ! ಮೊದಲು ಇಲ್ಲಿ ಅಗೆಯಿರಿ" ಎಂದನು.

ಬಡವನು ವರ್ಧನನನ್ನು ಬೇಸರದಿಂದ ನೋಡುತ್ತ, "ನಮ್ಮ ಬಡತನವೆಂದರೆ ನಿನಗೆ ಗೇಲಿಯಾಗಿದೆಯೆ ? ಬೆಳ್ಳಿ ನಾಣ್ಯ ತೋರಿಸಿ ಬಾಯಿಗೆ ಬಂದ ಹಾಗೆ ಹೇಳುವಿಯಾ ? ಅಗೆದು ಮಣ್ಣು ತಿನ್ನಲು ಹೇಳು ವಿಯಾ?" ಎಂದು ವೇದನೆಯಿಂದ ಹೀಯಾಳಿಸಿದನು.

"ಹಾಗೇನಿಲ್ಲ. ನಿಜ ಹೇಳುತ್ತೇನೆ. ಇಲ್ಲಿ ಅಗೆದು ನೋಡಿ" ಎಂದನು ವರ್ಧನ.

ಅಲ್ಲಿ ಅಗೆದು ನೋಡಲು, ಚಿನ್ನದ ನಾಣ್ಯಗಳಿಂದ ತುಂಬಿದ ಬೋಗುಣಿಯೊಂದು ಹೊರಬಿತ್ತು. ಬಡವನು ಸಂತೋಷದಿಂದ ವರ್ಧನನಿಗೆ ನಮಸ್ಕಾರ ಮಾಡಿ, "ಈ ದಿನದಿಂದ ನಮ್ಮ ದಾರಿದ್ರ್ಯ ತೀರಿ ಹೋಯಿತು" ಎಂದು ವರ್ಧನನು ಬೇಡೆಂದರೂ, ಕೆಲವು ಚಿನ್ನದ ನಾಣ್ಯಗಳನ್ನು ಒತ್ತಾಯ ಮಾಡಿ ಅವನಿಗೆ ಕೊಟ್ಟನು.

ಈ ವಿಧವಾಗಿ ವರ್ಧನನು ಒಂದು ತಿಂಗಳವರೆಗೆ ಗ್ರಾಮಗಳಲ್ಲಿ ತಿರುಗಿ ಗ್ರಾಮಸ್ಥರಿಗೆ ಚಿಕ್ಕ ಚಿಕ್ಕ ನಿಧಿ ನಿಕ್ಷೇಪಗಳನ್ನೋ, ಅವರು ಕಳೆದುಕೊಂಡ ಬೆಲೆ ಬಾಳುವ ವಸ್ತುಗಳನ್ನೋ, ಮನೆಗಳ ಹತ್ತಿರ ಅಡಗಿರುವ ವಿಷಸರ್ಪಗಳನ್ನೋ ತೋರಿಸಿ ಬಹಳ ಸಹಾಯ ಮಾಡಿದನು.

ಹೀಗೆ ಸಹಾಯ ಹೊಂದಿದವರೆಲ್ಲರೂ ವರ್ಧನನಿಗೆ ಅಷ್ಟೋ ಇಷ್ಟೋ ಧನವನ್ನು ನೀಡುತ್ತಿದ್ದರು. ಆದರಿಂದ ಅವನ ಜೀವಿತವು ಸುಗಮವಾಗಿ ನಡೆಯ ತೊಡಗಿತು.

ಒಂದು ದಿನ ವರ್ಧನನು ಗದ್ದೆಗಳ ನಡುವಿನ ಹುಣೆಯಲ್ಲಿ ನಡೆದು ಹೋಗುತ್ತಿದ್ದಾಗ. ಒಂದಡಿ ಯಷ್ಟು ಆಳದಲ್ಲಿ ಭೂಮಿಯೊಳಗೆ ನಿಧಿ ತುಂಬಿದ ಬಿಂದಿಗೆಗಳಿರುವುದನ್ನು ನೋಡಿದನು. ಆ ಗದ್ದೆಗಳು ಇಬ್ಬರು ಅಣ್ಣತಮ್ಮಂದಿರ ಸಮಷ್ಟಿ ಆಸ್ತಿ. ಇಬ್ಬರೂ ಕಷ್ಟಪಟ್ಟು ಕೆಲಸ ಮಾಡುತ್ತ, ಮಕ್ಕಳು ಮರಿ ಗಳೊಂದಿಗೆ ಬಹಳ ಅನ್ಯೋನ್ಯವಾಗಿದ್ದರು.

ವರ್ಧನನು ನಿಧಿಬಿಂದಿಗೆಗಳ ಸಂಗತಿಯನ್ನು ಅಲ್ಲಿ ಕೆಲಸ ಮಾಡಿಕೊಂಡಿದ್ದ ತಮ್ಮನ ಹತ್ತಿರ ಹೇಳಿ, ತನ್ನ ದಾರಿ ಹಿಡಿದು ಗ್ರಾಮದೊಳಗೆ ಹೋದನು. ನಿಧಿಯ

ಸಮಾಚಾರ ಕೇಳಿದ ಕೂಡಲೇ ತಮ್ಮನಲ್ಲಿ ಸ್ವಾರ್ಥ ಭಾವವು ತಲೆ ಎತ್ತಿತು. ಅವನು ನಡುರಾತ್ರಿಯ ಹೊತ್ತಿನಲ್ಲಿ ಅಲ್ಲಿಗೆ ಹೋಗಿ ಅಗೆಯಲು ಪ್ರಾರಂಭಿಸಿದನು. ಈ ಸಂಗತಿಯನ್ನು ತಿಳಿದ ಅಣ್ಣನು ಆಗಲೇ ಅಲ್ಲಿಗೆ ಹೋಗಿ, ಅಗೆದು ತೆಗೆದ ನಿಧಿ ಬಿಂದಿಗೆಗಳಲ್ಲಿ ಅರ್ಧಭಾಗ ತನಗೆ ಬರಬೇಕೆಂದು ಹೇಳಿದನು, ತಮ್ಮನು ಅದು ತನಗೆ ಮಾತ್ರ ತಿಳಿದು, ತಾನೇ ಅಗೆದುದಾದುದರಿಂದ ಕೊಡಲಾರೆನೆಂದನು. ಅದರಿಂದ ಇಬ್ಬರೂ ಜಗಳಕ್ಕೆ ಬಿದ್ದು ಹೊಡೆದಾಡಿ ಸ್ಮೃಹೆ ತಪ್ಪಿ ಬೀಳುವವರೆಗೂ ಆಯಿತು. ಬೆಳಗಾದ ಮೇಲೆ ಗ್ರಾಮಸ್ಥರು ಹೊಲವಲ್ಲಿ ಬಿದ್ದ ಅಣ್ಣತಮ್ಮಂದಿರನ್ನೂ, ನಿಧಿ ಬಿಂದಿಗೆಗಳನ್ನೂ ನೋಡಿದರು. ಚಿಕಿತ್ಸೆ, ಉಪಚಾರಗಳಿಂದ ಅಣ್ಣತಮ್ಮಂದಿರು ಬದುಕಿದರೂ, ನಿಧಿಯ ತಗಾದೆ ಉದ್ದಕ್ಕೆ ಬೆಳೆಯುತ್ತಾ ಹೋಯಿತು.

ಇದನ್ನೆಲ್ಲ ತಿಳಿದು ವರ್ಧನನ ಮನಸ್ಸು ವಿಚಲಿತವಾಯಿತು, ಬಹಳ ತಳಮಳಿಸಿದನು. ತನ್ನ ಅಪೂರ್ವ ವಿದ್ಯೆಯಿಂದ ಇತರರಿಗೆ ಮೇಲಾಗುವುದು ಮಾತ್ರವಲ್ಲದೆ, ಕೇಡು ಕೂಡಾ ಆಗುತ್ತದೆಂದು ಈಗ ತಿಳಿದನು. ಏನು ಮಾಡುವುದೆಂದು ತೋರದೆ, ತನ್ನ ಗ್ರಾಮದ ಹೊರಗಿರುವ ಸಿದ್ಧಾಶ್ರಮಕ್ಕೆ ಹೋಗಿ, ಸಿದ್ಧನನ್ನು ನೋಡಿ, ನಡೆದ ಸಂಗತಿಯನ್ನೆಲ್ಲಾ ಹೇಳಿ, "ಈಗ ನಾನು ಏನು ಮಾಡಬೇಕು ?" ಎಂದು ಕೇಳಿದನು.

ಸಿದ್ಧನು ಸ್ವಲ್ಪ ಆಲೋಚನೆ ಮಾಡಿ, "ಅಪ್ಪಾ. ನೀನು ತಕ್ಕ ಸಮಯದಲ್ಲಿ ಬದುಕಲಿಕ್ಕಾಗಿ ಯಾವ ವಿದ್ಯೆಯನ್ನೂ ಕಲಿಯದ ಕಾರಣದಿಂದಲೇ, ನನ್ನ ಹತ್ತಿರ ಬಂದು ಪರಿಹಾರ ಕೇಳಿ ಈ ಅಪೂರ್ವ ವಿದ್ಯೆಯನ್ನು ಕಲಿತಿರುವಿ. ಈಗ ಈ ವಿದ್ಯೆ ನಿನ್ನ ಮನಸ್ಸಿಗೆ ಶಾಂತಿ ಇಲ್ಲದಂತೆ ಮಾಡುವಂತಹುದಾಯಿತು. ಒಂದು ಕೆಲಸ ಮಾಡು, ಒಂದು ಸಾರಿ ಈ ವಿದ್ಯೆಯನ್ನು ನಿನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡುಬಿಡು. ಆಗ ನಿನಗೆ ನಿಧಿ ನಿಕ್ಷೇಪಗಳನ್ನು ನೋಡುವ ಶಕ್ತಿ ನಶಿಸಿ ಬಿಡುತ್ತದೆ. ಈ ಸಂಗತಿ ನಿನಗೆ ಮೊದಲೇ ಹೇಳಿದ್ದೇನೆ. ನೆನಪಿದೆಯಷ್ಟೇ ?" ಎಂದನು.

ವರ್ಧನನು ಸಿದ್ಧನಿಂದ ಅನುಜ್ಞೆ ಪಡೆದು ಊರ ಹೊರಗೆ ಹೊರಟನು. ಒಂದು ಆಲದ ಮರದ ಕೆಳಗೆ ಮಣ್ಣಿನಡಿಯಲ್ಲಿ ಕೆಲವು ಬೆಳ್ಳಿಯ ನಾಣ್ಯಗಳ ಮಡಕೆಗಳಿರುವುದು ಕಂಡಿತು. ಬೇರೆ ಬಗೆಯ ದೊಡ್ಡ ನಿಧಿಯ ಪ್ರಯತ್ನಕ್ಕೆ ಅವನು ಹೋಗದೆ, ಅವುಗಳನ್ನು ಅಗೆದು ತೆಗೆದುಕೊಂಡು ಹೋದನು.

ಆ ಧನದಿಂದ ಸಣ್ಣ ಹೊಲವನ್ನು ಕೊಂಡುಕೊಂಡು ಸೊಂಟಬಗ್ಗಿಸಿ ದುಡಿಯಲು ಕಲಿತು, ಗೆಯ್ಮೆ ಮಾಡುತ್ತ, ಯಾವ ಕಷ್ಟಗಳಿಗೂ ಒಳಗಾಗದೆ ಸುಖವಾಗಿ ಬದುಕಿದನು.






## ೬

[ಪದ್ಮಪಾದನೂ ಪಿಂಗಳನೂ ಭಲ್ಲೂಕ ಪರ್ವತ ಕಣಿವೆಯಲ್ಲಿ ಹರಿಯುವ ನದಿಯ ಬದಿಗೆ ಹೋದರು. ನದಿಯ ನೀರನ್ನೆಲ್ಲ ಬತ್ತಿಸಲು ಪದ್ಮಪಾದನು ಸಮಾಧಿ ನಿಷ್ಠೆಯಲ್ಲಿ ಮಂತ್ರ ಜಪಿಸುತ್ತಿರುವಾಗ, ಪಿಂಗಳನು ಗದೆಯೊಂದಿಗೆ ಕೆಡಿಸಲು ಬರುವ ದುಷ್ಟ ಶಕ್ತಿಗಳನ್ನು ಓಡಿಸುತ್ತ ಅವನನ್ನು ರಕ್ಷಿಸುತ್ತಿದ್ದನು. ಸ್ವಲ್ಪ ಹೊತ್ತಿಗೆ ನದಿಯ ನೀರು ಬತ್ತಿತು. ಅದರಡಿಯಲ್ಲಿದ್ದ ದೇವಾಲಯದ ಶಿಖರವು ಕಂಡಿತು.]

**ಬ**ತ್ತಿ ಹೋದ ನದಿಯ ತಳದಲ್ಲಿ ಮೇಲೆದ್ದು ಕಾಣುವ ದೇವಾಲಯ ಶಿಖರವನ್ನು ಪದ್ಮಪಾದನು ಸ್ವಲ್ಪ ಹೊತ್ತು ನೆಟ್ಟಗಣ್ಣಿನಿಂದ ನೋಡಿದನು. ಆ ಶಿಖರದ ಪಕ್ಕದಲ್ಲಿ ನಿಂತುಕೊಂಡಿದ್ದ ಮಹಾ ಮಾಯನ ಶಿಷ್ಯರನ್ನು ನೋಡಿ ಹತ್ತಿರ ಬರುವಂತೆ ಕೈಸನ್ನೆ ಮಾಡಿದನು.

ಅವರಿಬ್ಬರೂ ನಿಮಿಷಮಾತ್ರದೊಳಗೆ ಪದ್ಮ ಪಾದನ ಸಮೀಪಕ್ಕೆ ಬಂದು ಬಾಗಿ ನಮಸ್ಕರಿಸಿ ಬಹಳ ವಿನಯದಿಂದ ಅವನ ಅಪ್ಪಣೆಯನ್ನು ಇದಿರು ನೋಡುವವರಂತೆ ನಿಂತರು.

"ಸರಿ. ನಿಮ್ಮಿಂದ ಆಗಬೇಕಾದ ಕೆಲಸವಾಯಿತು. ನೀವು ನನ್ನ ಆಜ್ಞೆಯನ್ನು ಶಿರಸಾವಹಿಸಿ ನೆರವೇರಿ ಸಿದಿರಿ. ನನಗೆ ಬಹಳ ತೃಪ್ತಿಯನ್ನುಂಟು ಮಾಡಿದಿರಿ. ಸಂತೋಷವಾಯಿತು. ಪ್ರಸ್ತುತದಲ್ಲಿ ನೀವು ನಿಮ್ಮ ಇಷ್ಟ ಬಂದ ಸ್ಥಳಕ್ಕೆ ಹೋಗಬಹುದು. ನನ್ನ ಮಂತ್ರ ಶಕ್ತಿಯ ಕಾಲು ಭಾಗ ಮಾತ್ರ ನಿಮ್ಮನ್ನು ಹಿಡಿದಿರು ತ್ತದೆ." ಎಂದು ಪದ್ಮಪಾದನು ಅವರನ್ನು ನೋಡಿ ಹೇಳಿದನು.

ಆದರೆ ಮಹಾಮಾಯನ ಶಿಷ್ಯರು ಸಂತೋಷ ದಿಂದ ಹೊರಡಲು ಸಿದ್ಧರಾದರಂತೆ ಕಾಣಲಿಲ್ಲ.







ಅವರೇನೋ ಬೇರೆ ಆಲೋಚನೆಯಿಂದ ಪರಸ್ಪರ ನೋಡಿಕೊಂಡರು. ಬಳಿಕ ಅವರಲ್ಲಿ ಒಬ್ಬನು ಧೈರ್ಯ ತಂದುಕೊಂಡು, "ಅಯ್ಯಾ, ಮಹಾ ಮಾಂತ್ರಿಕಾ! ದಯಮಾಡಿ ನಮ್ಮದೊಂದು ವಿಜ್ಞಾಪನೆಯನ್ನು ಆಲಿಸಬೇಕೆಂದು ಬೇಡಿಕೊಳ್ಳುತ್ತೇವೆ. ನಮ್ಮಿಂದ ನಿಮಗೆ ಆಗಬೇಕಾದ ಸಹಾಯ ಆಗಿಹೋಯಿತು. ಇನ್ನಾದರೂ ನಮ್ಮನ್ನು ಮಂತ್ರಬಂಧನದಿಂದ ಪೂರ್ತಿ ಬಿಡುಗಡೆ ಮಾಡಿ ಕಳುಹಿಸಬಾರದೆ? ಹೀಗೆಯೇ ನಾವಿರುವುದರಿಂದ, ಸ್ವತಂತ್ರವಾಗಿ ತಿರುಗಾಡಲು ಸಾಧ್ಯವಿಲ್ಲದಂತೆ ಸೂತ್ರದ ಕೊನೆಯನ್ನು ಮಂತ್ರದ ಮೂಲಕ ನಿಮ್ಮಲ್ಲೇ ಇಟ್ಟುಕೊಂಡಿದ್ದೀರಲ್ಲಾ? ಪೂರ್ತಿ ಬಿಟ್ಟುಬಿಡಬಾರದೆ? ನಾವು ಬೇಕಂತ ನಿಮಗೆ ಯಾವ ಕೇಡೂ ಬಗೆದವರಲ್ಲ. ಅದು ನಿಮಗೂ ಗೊತ್ತಿದೆ" ಎಂದರು ದೀನ ಸ್ವರದಿಂದ.

"ಓ ಅದುವೋ ನಿಮ್ಮ ಆಲೋಚನೆ? ನನ್ನನ್ನು ಯಾರೆಂದುಕೊಂಡಿದ್ದೀರಿ? ನಾನು ಯಾವ ಕೆಲಸಕ್ಕೆ ಬಂದೇನೋ ಆ ಕೆಲಸ ಪೂರ್ತಿ ನೆರವೇರದೆ ನಿಮ್ಮನ್ನು ಮಂತ್ರಬಂಧದಿಂದ ಮುಕ್ತಮಾಡುವೆನೆಂದು ಕೊಂಡಿರಾ, ನಿಮ್ಮ ಈ ವಿನಯಗಳನ್ನು ನಂಬಿ?" ಎಂದು ಪದ್ಮಪಾದನು ಗಟ್ಟಿಯಾಗಿ ನಕ್ಕು, "ನೀವೇನಾದರೂ ಸಾಧಾರಣ ಪಿಶಾಚಿಗಳಲ್ಲವೆಂದು ನನಗೆ ಗೊತ್ತು. ಮಹಾ ದುಷ್ಟ ಕ್ರೂರ ಪಿಶಾಚಗಣಕ್ಕೆ ಸೇರಿದವರು ನೀವು! ಆದ್ದರಿಂದ ನಿಮ್ಮ ಗುರುವಿನ ಸಮಾಧಿಯಿಂದ ನಾನು ಸಂಗ್ರಹಿಸಬೇಕಾದುದನ್ನು ಸಂಗ್ರಹಿಸದೆ, ನಿಮ್ಮನ್ನು ಮಂತ್ರಬಂಧನದಿಂದ ಪೂರ್ತಿ ಮುಕ್ತಮಾಡಲು ಸಾಧ್ಯವೇ ಇಲ್ಲ. ಈಗ ಬಿಡುವಷ್ಟಕ್ಕೇ ತೃಪ್ತರಾಗಿರಿ. ಹೆಚ್ಚಿನ ಕಷ್ಟ ಕೊಡಲಾರೆ" ಎಂದನು.

ಪದ್ಮಪಾದನು ಹೇಳಿದುದನ್ನು ಕೇಳಿ, ಮಹಾ ಮಾಯನ ಶಿಷ್ಯರಿಬ್ಬರೂ ಏನೂ ತೋರದವರಂತಾದರು. ಆ ಸ್ಥಿತಿಯಲ್ಲಿ ಅವರು ಪದ್ಮಪಾದನಿಗೆ ಸಾಷ್ಟಾಂಗ ನಮಸ್ಕಾರಮಾಡಿ, "ಮಹಾ ಮಾಂತ್ರಿಕಾ! ನಾವು ನಿಮಗೆ ದಾಸಾನುದಾಸರಾಗಿರುವವರು. ಮಂತ್ರ ಬಲದಿಂದ ನೀವು ನಮ್ಮನ್ನು ಬಂಧಿಸಿದಂದಿನಿಂದಲೂ ನಮಗೆ ಹೊಟ್ಟೆ ತುಂಬಾ ಆಹಾರವಿಲ್ಲದಾಗಿದೆ. ನಾವು ಶಕ್ತಿಹೀನರಾಗಿ ಹೋಗಿಬಿಟ್ಟೆವು. ಇನ್ನು ಮುಂದೆ ಅಂತಹ ಶಕ್ತಿ ನಮಗೆ ಬರುವುದೆಂಬ ನಂಬುಗೆಯೂ ನಮಗಿಲ್ಲ." ಎಂದು ವಿಲಪಿಸತೊಡಗಿದರು.

ಇದನ್ನು ನೋಡುತ್ತಿದ್ದ ಪಿಂಗಳನಿಗೆ ಅವರಿಬ್ಬರ ಮೇಲೆ ಬಹಳ ಕರುಣೆ ಒಸರಿತು. ಅವನು ಪದ್ಮಪಾದನ ಕಡೆಗೆ ತಿರುಗಿ. "ಇವರು ಪಾಪ, ದಾಸಾನುದಾಸರೆಂದರಲ್ಲಾ..." ಎಂದು ಏನೋ ಹೇಳಲಿರುವಷ್ಟರಲ್ಲಿ, ಪದ್ಮಪಾದನು ಅವನನ್ನು ಸುಮ್ಮನಿರುವಂತೆ ಹೇಳಿ, ಮಹಾಮಾಯನ ಶಿಷ್ಯರೊಡನೆ ಹೀಗೆಂದನು:

"ನೀವು ಇಷ್ಟು ಕಾಲ ಸರಿಯಾದ ಆಹಾರವಿಲ್ಲದೆ ಬಳಲಿದ್ದೀರೆಂಬುದು ನನಗೆ ಗೊತ್ತು. ನಿಮಗೆ ಬೇಟೆ

ಯಾಡುವ ಶಕ್ತಿಯನ್ನು ಕೊಟ್ಟುಬಿಟ್ಟರೆ, ಮರುಕ್ಷಣ ದಲ್ಲಿ ನೀವು ನನ್ನನ್ನೇ ಬೇಟೆಯಾಡಿ ಕೊಲ್ಲಲು ಪ್ರಯತ್ನಿಸುವವರು. ನಿಮಗೆ ಪಾಪ, ಪುಣ್ಯ, ಕೃತಜ್ಞತೆ ಯಾವುದೂ ತಿಳಿಯದು. ನಿಜತಾನೆ ?"

"ಮಹಾಮಾಂತ್ರಿಕರಾದ ನಿಮ್ಮನ್ನು ಏನಾದರೂ ಮಾಡ ಬೇಕಾದರೆ ಎಂತಹ ಘೋರ ಪಿಶಾಚಿಗೂ ಧೈರ್ಯಬಾರದು. ಅತ್ಯಂತ ಕ್ಷುದ್ರರಾದ ನಾವೇನು ನಿಮ್ಮನ್ನು ಬೇಟೆಯಾಡಿಯೇವು ಸ್ವಾಮಿ ?" ಎಂದು ಮಹಾಮಾಯನ ಶಿಷ್ಯರು ಮೋರೆಯಲ್ಲಿ ದೀನಾತಿ ದೀನತೆಯನ್ನು ತೋರಿಸಿ ಅಂಗಲಾಚಿದರು.

ಪದ್ಮಪಾದನು ನಕ್ಕನು. ತರುವಾಯ ಪಿಂಗಳನ ಕೈಯಿಂದ ಮಂತ್ರಶಕ್ತಿಯ ಗದೆಯನ್ನು ತೆಗೆದು ಕೊಂಡು, "ಇದೋ, ನಿಮಗಿಬ್ಬರಿಗೂ ಪ್ರಸ್ತುತಕ್ಕೆ ಮಾನವರ ಹೊರತು ಬೇರೆ ಯಾವುದನ್ನಾದರೂ ಕೊಂದು ತಿನ್ನುವ ಶಕ್ತಿಯನ್ನು ಕೊಡುತ್ತೇನೆ. ಅದಕ್ಕೆ ತಕ್ಕ ಹಾಗೆ ನಿಮಗೆ ಯಾವ ರೂಪ ಬೇಕು ? ಕೇಳಿರಿ !" ಎಂದು ಕೇಳಿದನು.

"ಪದ್ಮಪಾದರೇ, ಅವರಿಗೆ ಆನೆಯ ರೂಪ ಕೊಟ್ಟುಬಿಡಿರಿ. ಅದಕ್ಕಿಂತ ದೊಡ್ಡ ರೂಪ ಯಾವುದಿದೆ ? ಅಲ್ಲಿ ಕಾಣುವ ಕಾಡಿನೊಳಗೆ ನಿರ್ಭಯ ವಾಗಿ ಬದುಕಿರುತ್ತಾರೆ" ಎಂದನು ಪಿಂಗಳ.

"ಆನೆಯ ರೂಪವೇ ! ಬೇಡ ಬೇಡ !" ಎಂದು ಮಹಾಮಾಯನ ಶಿಷ್ಯರಿಬ್ಬರೂ ಏಕಕಂಠದಿಂದ ಕೂಗಿದರು : "ಆ ರೂಪದಲ್ಲಿ ನಾವು ಸೊಪ್ಪು ಸೊದೆಗಳ ಹೊರತು ಮಾಂಸ ತಿನ್ನಲು ಸಾಧ್ಯವಿಲ್ಲ. ಸಸ್ಯಾಹಾರವೆಂದರೆ ನಮಗೆ ಆಗದು. ಅದು ನಮಗೆ ವಿಷತುಲ್ಯವೇ ಆಗುತ್ತದೆ. ಕಡೆಗೆ ಇನ್ನಿಷ್ಟು ಬಲ ಇಳಿದು ಯಾವುದಕ್ಕೂ ಆಗದ ಹಾಗಾಗುತ್ತೇವೆ."

"ಹಾಗಾದರೆ ನಿಮ್ಮಲ್ಲಿ ಒಬ್ಬನನ್ನು ಸಿಂಹ ವಾಗಿಯೂ–" ಎಂದು ಪದ್ಮಪಾದನು ಮಹಾ ಮಾಯನ ಶಿಷ್ಯರಲ್ಲಿ ಒಬ್ಬನ ತಲೆಯ ಮೇಲೆ ಗದೆ



ಯಿಂದ ಬಡಿದನು. ಮರುಕ್ಷಣದಲ್ಲಿ ಅವನು ಸಿಂಹವಾಗಿ ಮಾರ್ಪಟ್ಟು ಜೂಲಾಡಿಸುತ್ತಾ ನಿಂತನು.

"ಮತ್ತೊಬ್ಬನನ್ನು ಹೆಬ್ಬುಲಿಯಾಗಿಯೂ ಮಾಡುತ್ತೇನೆ" ಎಂದು ಪದ್ಮಪಾದನು. ಮಾತು ಪೂರ್ತಿಮಾಡಿ, ಎರಡನೆಯವನ ತಲೆಯ ಮೇಲೆ ಗದೆಯಿಂದ ಹೊಡೆದನು, ಕೂಡಲೇ ಅವನು ಹೆಬ್ಬುಲಿ ಯಾಗಿ ಬದಲಾದನು.

ಪಿಂಗಳನು ಅವರಿಬ್ಬರ ಮಾರ್ಪಾಡುಗಳನ್ನು ನೋಡಿ, ಆಶ್ಚರ್ಯಪಟ್ಟು, "ಭಲೆ ಭಲೆ ! ಇನ್ನು ನಿಮಗಿಬ್ಬರಿಗೂ ಬೇಕಾದಷ್ಟು ಮಾಂಸಾಹಾರ ! ಅಲ್ಲಿ ಕಾಣುವ ಅಡವಿಯಲ್ಲಿ ಗಮ್ಮತ್ತಾಗಿರಬಹುದು !" ಎಂದು ಹೆಬ್ಬುಲಿಯನ್ನೂ, ಸಿಂಹವನ್ನೂ ತಡವಿ ತಟ್ಟಿ ದನು. ಕೂಡಲೇ ಕ್ರೂರಮೃಗಗಳ ರೂಪದಲ್ಲಿರುವ ಮಹಾಮಾಯನ ಶಿಷ್ಯರಿಬ್ಬರೂ, ಭೀಕರವಾಗಿ ಗರ್ಜಿ ಸುತ್ತ ಅತ್ತ ಕಾಣುವ ಕಾಡಿನ ಕಡೆಗೆ ಓಡಿದರು. ಈ ರೂಪಗಳು ಅವರಿಗೆ ತೃಪ್ತಿಯನ್ನು ತಂದಂತೆ ಕಾಣಿಸಿತು.







ಪದ್ಮಪಾದನು ಮಹಾಮಾಯನ ಶಿಷ್ಯರು ಕಾಡಿಗೆ ಓಡುವ ಚೆಂದವನ್ನು ಸ್ವಲ್ಪ ಹೊತ್ತು ನೋಡಿ, ಪಿಂಗಳನ ಕಡೆಗೆ ತಿರುಗಿ, "ಇನ್ನು ನಾವು ಬಹಳ ಜಾಗರೂಕರಾಗಿರಬೇಕಾಗಿದೆ. ನಮ್ಮ ಪ್ರಯತ್ನವನ್ನು ಕೆಡಿಸಿಹಾಕಲಿಕ್ಕಷ್ಟೇ ಅಲ್ಲದೆ, ನಮ್ಮನ್ನು ಸಂಹರಿಸಲಿಕ್ಕೆ ಕೂಡಾ ಅನೇಕ ದುಷ್ಟಶಕ್ತಿಗಳು ಕಾದು ಕೊಂಡಿವೆ. ಇದನ್ನು ಮರೆಯದೆ ನಮ್ಮ ಕೆಲಸ ನೋಡಿಕೊಳ್ಳಬೇಕು. ಹೀಗೆ ಬಾ, ಇಲ್ಲಿನಿಂತು ಚೆನ್ನಾಗಿ ನೋಡು! ಬತ್ತಿದ ನದಿಯ ಮಧ್ಯದಲ್ಲಿ ಆ ಹಾಳು ದೇವಾಲಯದ ಶಿಖರವು ನಿನಗೆ ಸ್ಪಷ್ಟವಾಗಿ ಕಾಣುವುದಷ್ಟೆ?" ಎಂದು ಪಿಂಗಳನನ್ನು ತನ್ನ ಮುಂದೆ ನಿಲ್ಲಿಸಿ ಕೇಳಿದನು.

ಪಿಂಗಳನು ಅದರ ಕಡೆಗೆ ನೋಡುತ್ತ ಕಾಣುತ್ತದೆಂದು ತಲೆಯಾಡಿಸಿದನು.

"ಹಾಗಾದರೆ ನೀನೇ ಅದಕ್ಕೆ ತಕ್ಕವನೆಂದು ನಿಶ್ಚಯವಾಯಿತು. ನಿನಗೆ ಜಯವಾಗುವುದೂ ನಿಶ್ಚಯ. ನೀನೀಗ ಆ ದೇವಾಲಯಕ್ಕೆ ಹೋಗಿ ಮಹಾಮಾಯನ ಸಮಾಧಿಯನ್ನು ತಲಪಬೇಕು. ಆ ಸಮಾಧಿಯನ್ನು ತಲಪುವ ಮೊದಲು ನೀನು ದಾಟಬೇಕಾದ ದ್ವಾರಗಳ ಸಂಖ್ಯೆ ಆರು. ಆರು ದ್ವಾರಗಳಲ್ಲಿಯೂ ರಕ್ಷಕರಾಗಿ ಬಹು ಭಯಂಕರರಾದ ಮಾಯದ ರಕ್ಕಸರಿರುತ್ತಾರೆ. ಅವರಲ್ಲಿ ಪ್ರತಿಯೊಬ್ಬರೂ ನಿನ್ನನ್ನು ಸಂಹರಿಸಲಿಕ್ಕೇ ಬರುತ್ತಾರೆ. ನೀನು ಅವರನ್ನು ನೋಡಿ ಸ್ವಲ್ಪ ಮಾತ್ರ ಭಯವನ್ನು ತೋರಿಸಿದರೂ ನಮ್ಮ ಪ್ರಯತ್ನ ಹಾಳಾಗುವುದಷ್ಟೇ ಅಲ್ಲ, ಪ್ರಾಣಾಪಾಯವೂ ಉಂಟಾಗುತ್ತದೆ. ತುಂಬ ಹುಷಾರ್! ಸರ್ವಸಾಧಾರಣವಾಗಿ ನಿನ್ನ ಪರಿಚಯದ ಸ್ಥಳಕ್ಕೆ ಹೋಗುವವನ ಹಾಗೆಯೇ ಒಳಗೆ ಪ್ರವೇಶಿಸು." ಎಂದನು ಪದ್ಮಪಾದ.

ಪಿಂಗಳನು ಉತ್ತರವೇನೂ ಕೊಡಲಿಲ್ಲ. ಅವನ ದೃಷ್ಟಿ ನದಿಯ ತಳದಲ್ಲಿರುವ ಪಾಳು ದೇವಾಲಯದ ಮೇಲೆಯೇ ಇದ್ದಿತು. ಪದ್ಮಪಾದನು ಅವನನ್ನು ಒಂದು ಸಾರಿ ನೋಡಿ, "ಪಿಂಗಳಾ, ಅಲ್ಲಿಯವರೆಗೆ ನೀನೊಬ್ಬನೇ ಹೋಗುವೆನೆಂದು ಎಣಿಸಬೇಡ. ಮೊದಲನೇ ಬಾಗಿಲಿನವರೆಗೆ ನಾನೂ ನಿನ್ನೊಂದಿಗೆ ಬರುತ್ತೇನೆ. ಆ ದ್ವಾರವನ್ನು ನೀನು ತೆರೆದು ಪ್ರವೇಶಿಸಿದ ಮೇಲೆ, ಉಳಿದ ಐದು ದ್ವಾರಗಳನ್ನು ಕೂಡಾ ತೆರೆದುಕೊಂಡು, ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಬೇಕಾದವನು ನೀನೇ. ಆಗ ನಾನು ಅಲ್ಲೆಲ್ಲಿಯೂ ಇರಲಾರೆನು. ಆದರೂ ನನ್ನ ದೃಷ್ಟಿ ನಿನ್ನ ಮೇಲೆಯೇ ಇರತ್ತದೆಂದು ನಂಬು." ಎಂದನು.

ಹೀಗೆ ಹೇಳಿ ಪದ್ಮಪಾದನು ಮುಂದೆ ಹೊರಟನು. ಅವನೊಂದಿಗೆ ಪಿಂಗಳನೂ ನಡೆದನು. ಒಂದು ಬೊಟ್ಟು ನೀರೂ ಇಲ್ಲದ ನದಿಯ ತಳದಲ್ಲಿ ನಡೆದು ಅವರಿಬ್ಬರೂ ಪಾಳುದೇವಾಲಯವನ್ನು ಸಮೀಪಿಸಿದರು. ಅದರ ಮೊದಲನೇ ದ್ವಾರವು ನೋಡುವವರಿಗೆ



ಬಹಳ ಭಯವನ್ನು ಹುಟ್ಟಿಸುವಂತಿತ್ತು. ದಪ್ಪವಾದ ಕರಿಮರದ ದ್ವಾರಬಂಧದ ಬಾಗಿಲ ಹಲಗೆಗಳಿಗೆ ಅನೇಕ ವಿಧದ ಭಯಂಕರಾಕೃತಿಗಳನ್ನು ಕೆತ್ತಲಾಗಿತ್ತು. ಎರಡು ಬಾಗಿಲನ್ನೂ ಹಾಕಿ ಸೇರಿಸಿದ ಅಗಳಿಯನ್ನು ಸುತ್ತಿಕೊಂಡು ಒಂದು ಸರ್ಪವು ಹೆಡೆಬಿಚ್ಚಿ ಸುರುಳಿ ಸುರುಳಿಯಾಗಿ ಸುತ್ತಿಕೊಂಡೇ ಆಡಿಗಡಿಗೂ ಬುಸುಗುಡುತ್ತಿದ್ದಿತು.

ಪದ್ಮಪಾದನು ಆ ಸರ್ಪದ ಕಡೆಗೆ ಕೈಯಾಡಿಸಿ, "ಪಿಂಗಳಾ, ನೀನು ನಿರ್ಭಯದಿಂದ ಆ ಸರ್ಪವನ್ನು ಸರ್ಪವೆಂದುಕೊಳ್ಳದೆ ನಿನ್ನ ಕೈಯಿಂದ ಮುಟ್ಟಬೇಕು. ಆಮೇಲೆ ಒಳಗಿನಿಂದ ಒಂದು ಭೀಕರಾಕಾರವು ನಿನ್ನನ್ನು ಪ್ರಶ್ನಿಸುತ್ತದೆ. ನೀನು ಯಾರೆಂಬುದನ್ನು ನಿಃಶಂಕೆಯಿಂದ ಹೇಳಿಬಿಡು. ಆಗ ಬಾಗಿಲು ತೆರೆದುಕೊಳ್ಳುತ್ತದೆ. ಆಮೇಲೆ ಏನೇನು ನಡೆಯುತ್ತದೆಂಬುದನ್ನು ನಿನಗೆ ಹೇಳುವುದೆಂದರೆ, ನನ್ನ ಮಂತ್ರ ಶಕ್ತಿಯನ್ನು ಕಳೆದುಕೊಳ್ಳುವುದೇ ಆಗುತ್ತದೆ. ಆದುದರಿಂದ ನೀನು ಯಾವುದಕ್ಕೂ ಹೆದರದಿದ್ದರೆ ಸರಿ. ಎಲ್ಲಾ ದ್ವಾರಗಳೂ ತೆರೆದುಕೊಂಡು ಮಹಾ ಮಾಯನ ಸಮಾಧಿಯ ಬಳಿಗೆ ಹೋಗುವಿ. ಅಲ್ಲಿರುವ ಅಪೂರ್ವ ವಸ್ತುಗಳ ಸಂಗತಿ ಏನೆಂಬುದೆಲ್ಲ ನಿನಗೆ ಗೊತ್ತೇ ಇದೆ. ಮತ್ತೆ ಹೇಳ ಬೇಕಾಗಿಲ್ಲವಷ್ಟೇ ?" ಎಂದನು.

"ಪದ್ಮಪಾದರೇ, ನಾನು ಎಂತಹ ಭೀಕರಕ್ಕೂ ಹೆದರಲಾರೆನು. ಆದರೆ ಮರೆಯಲ್ಲಿ ಅಡಗಿಕೊಂಡಿದ್ದು ಮೋಸದಿಂದ ನನ್ನನ್ನು ಹತ ಮಾಡಲು ನೋಡುವಂತಹ ದುಷ್ಟಶಕ್ತಿ ಯಾವುದೂ ಇಲ್ಲವಷ್ಟೆ ?" ಎಂದು ಪಿಂಗಳನು ಪ್ರಶ್ನಿಸಿದನು.

"ಮನಸ್ಸು ಮಾಡಿದರೆ ನಿನ್ನನ್ನು ಮೋಸವೇ ನಿಲ್ಲದೆಯೇ ಈ ದೇವಳದಲ್ಲಿರುವ ಶಕ್ತಿಗಳು ಹತ ಮಾಡಬಲ್ಲವು. ಆದರೆ ನೀನು ಭಯವಿಲ್ಲದೆ ಮುಂದೆ ಮುಂದೆ ಹೋಗುತ್ತಿದ್ದರೆ ಅವು ನಿನ್ನನ್ನು ಏನೂ ಮಾಡಲಾರವು, ಹೆದರಿದ ಹಾಗೆ ತೋರಗಲೇಬಾರದು. ನೀನು ನಮಗೆ ಬೇಕಾದ ವಸ್ತುಗಳನ್ನು ಸಂಪಾದಿಸಿದ ಮೇಲೆ ನಿನಗಿಂತ ಹೆಚ್ಚಿನ ಶಕ್ತಿವಂತನು ಪ್ರಪಂಚದಲ್ಲೇ ಇನ್ನೊಬ್ಬನಿರಲಾರನು ನಿನಗೆ ಜಯವಾಗಲಿ !" ಎಂದನು ಪದ್ಮಪಾದ.

"ಅದಕ್ಕಾಗಿ ತಾನೇ ನಾನು ಇಷ್ಟು ಗಂಡಾಂತರಗಳನ್ನು ಇದಿರಿಸಲು ಸಿದ್ಧನಾದದ್ದು ? ಭಯಶಂಕೆಗಳನ್ನೆಲ್ಲ ಎಲ್ಲಿಯೋ ಕಟ್ಟಿ ಬಿಸಾಡಿದ್ದೇನೆ. ನಾನು ಹಳೆಯ ಪಿಂಗಳನೇ ಅಲ್ಲ !" ಎನ್ನುತ್ತಾ ಪಿಂಗಳನು ಮುಂದಕ್ಕೆ ಅಡಿ ತೆಗೆದನು.

ಅದೇ ಸಮಯದಲ್ಲಿ ಪದ್ಮಪಾದನು ಹಿಂದಿರುಗಿ ಹೋಗಿ ಈ ಮೊದಲು ತಾನು ಸಮಾಧಿನಿಷ್ಠೆಯಲ್ಲಿದ್ದ ಸ್ಥಳದಲ್ಲಿ ಮಂತ್ರ ಜಪಿಸುತ್ತ ಕುಳಿತನು.

ಪಿಂಗಳನು ನಿರ್ಭೀತಿಯಿಂದ ದ್ವಾರವನ್ನು ಸಮೀಪಿಸಿ, ಹೆಡೆಯೆತ್ತಿ ಭುಸುಗುಡುತ್ತಿರುವ ಸರ್ಪವನ್ನು ಬಲಗೈಯಿಂದ ಎರಡು ಸಾರಿ ಮುಟ್ಟಿದನು.




ಅಷ್ಟೊಂದು ಭಯಂಕರವಾಗಿದ್ದ ಸರ್ಪ ಏನೂ ಮಾಡದೆ ತಲೆ ತಗ್ಗಿಸಿ ಸುರುಳಿಗಳನ್ನು ಅಗಲಿಯಿಂದ ಸಡಿಲಿಸಿ ಸುಮ್ಮನಾಯಿತು. ಆದರೆ ಅದೇ ಕ್ಷಣದಲ್ಲಿ ಬಾಗಿಲ ಹಿಂದೆ ಭೂಮಿ ನಡುಗುವಂತೆ ಒಂದು ಹೂಂಕಾರವು ಹೊರಟು, ಕರ್ಣಕಠೋರವಾದ ಧ್ವನಿಯಿಂದ, ಕರ್ಕಶ ಕಂಠವು ಹೀಗೆ ಪ್ರಶ್ನಿಸಿತು:

"ಒಳಗೆ ಹೇಗೆ ಬರಬೇಕೆಂದು ತಿಳಿಯದೆ ಮಹಾ ಮಾಯನ ಸಮಾಧಿಯ ಪ್ರಥಮ ದ್ವಾರವನ್ನು ಸಮೀಪಿಸಿದ ಅಂಜುಕುಳಿ ಭಂಡ ಯಾರವನು? ಉತ್ತರ ಕೊಡು."

"ನನ್ನ ಹೆಸರು ಪಿಂಗಳ. ಈ ಆಲಯದೊಳಗೆ ಪ್ರವೇಶಿಸುವ ಹಕ್ಕುದಾರನು ನಾನು. ಅವಂತೀ ನಗರದ ಜಾಲಗಾರ! ನನ್ನ ಗುರು ಮಹಾ ಮಾಂತ್ರಿಕ ಪದ್ಮಪಾದರು!" ಎಂದನು ಪಿಂಗಳ.

"ಸಾಕು ಸಾಕು! ನಿನ್ನ ಗುರು ಯಾರೆಂಬುದು ನನಗೆ ಬೇಕಾಗಿಲ್ಲ. ನೀನು ಜಾಲರಿ ಪಿಂಗಳನೆಂದು ತಿಳಿದರೆ ಸರಿ. ಇಗೋ ಬಾಗಿಲು ತೆರೆಯುತ್ತೇನೆ". ಎಂಬ ಶಬ್ದವು ಕೇಳಿಸಿತು. ಮರುಕ್ಷಣದಲ್ಲಿ ಬಾಗಿಲುಗಳೆರಡೂ ಥಾಳಾಗಿ ತೆರೆದುವು.

ಪರ್ವತಾಕಾರನಾಗಿದ್ದ ಕರ್ರಗಿನವನೊಬ್ಬನು, ತಳತಳ ಹೊಳೆಯುವ ಕತ್ತಿಯನ್ನು ಕೈಯಲ್ಲಿಟ್ಟುಕೊಂಡು ದ್ವಾರಕ್ಕೆ ಅಡ್ಡವಾಗಿ ನಿಂತುಕೊಂಡನು. ಅವನನ್ನು ಲಕ್ಷಿಸದೆ ಪಿಂಗಳನು ಮುಂದಕ್ಕೆ ನಡೆದನು, ತಡೆ ಏನೂ ಇಲ್ಲವೆಂಬ ಹಾಗೆ!

ಪರ್ವತಾಕಾರನು ಕತ್ತಿಯ ಪೆಟ್ಟಿನ ಅಳವಿಗೆ ಪಿಂಗಳನು ಬರುತ್ತಲೇ "ಹುಂ" ಎಂದು ಹುಂಕರಿಸಿ, "ನೀನು ಜಾಲಗಾರ ಪಿಂಗಳನಾದರೆ, ನಿಜಕ್ಕೂ ಈ ದೇವಾಲಯದ ಸೊತ್ತಿನ ಹಕ್ಕುದಾರನಾದರೆ ಕುತ್ತಿಗೆ ಚಾಚು. ಒಂದೇಟಿಗೆ ತುಂಡಾಗುವ ಹಾಗೆ ನಿನ್ನ ಕುತ್ತಿಗೆ ಕಡಿಯುತ್ತೇನೆ" ಎಂದನು.

ರೆಪ್ಪೆ ಮುಚ್ಚುವುದರೊಳಗೆ ಪಿಂಗಳನು ಒಂದು ನಿರ್ಣಯಕ್ಕೆ ಬಂದನು. ಇಷ್ಟು ದೂರ ಬಂದು ಹಿಂದಿರುಗುವುದೆಂದರೆ ಪ್ರಾಣಾಪಾಯವೇ. ಮುಂದಡಿ ಇಟ್ಟರೂ ಪ್ರಾಣಾಪಾಯವೇ! ಎಲ್ಲಾ ಒಂದೇ! ಎಂದುಕೊಂಡು ಕುತ್ತಿಗೆ ಬಗ್ಗಿಸಿ ಅಡಿ ಮುಂದಿಟ್ಟನು. ಅದೇ ಕ್ಷಣದಲ್ಲಿ ಪರ್ವತಾಕಾರನ ಕೈಯಲ್ಲಿದ್ದ ಕತ್ತಿ ಝಣಾಕೆಂದು ಕೆಳಗೆ ಬಿತ್ತು. ಅದರೊಂದಿಗೆ ಪರ್ವತಾಕಾರನೂ ದಭಾಲ್ಲನೆ ಪಿಂಗಳನ ಮುಂದೆ ಬಿದ್ದು ಶವದ ಹಾಗಾದನು. ಪದ್ಮಪಾದನು ಹೇಳಿದ ಎಚ್ಚರಿಕೆಯನ್ನು ಪಿಂಗಳನು ನೆನಪಿಗೆ ತಂದುಕೊಂಡನು.

ಹೀಗಾದುದನ್ನು ನೋಡಿದ ಕೂಡಲೇ ತನ್ನ ಜಾಲಗಾರ ನಾಮದಲ್ಲಿ ಏನೋ ಮಹತ್ವವಿದೆ ಎಂದುಕೊಂಡು ಪಿಂಗಳನಿಗೆ ಎಲ್ಲಿಲ್ಲದಷ್ಟು ಬಲ ಸತ್ವವೂ ಧೈರ್ಯವೂ ಜತೆಗೂಡಿದುವು. ಅವನು ನೇರಾಗಿ ಎದೆಚಾಚಿಕೊಂಡು ಎರಡನೇ ದ್ವಾರದ ಒಳಗೆ ಹೋದನು. ಆ ದ್ವಾರದ ಬಾಗಿಲುಗಳು ಕೂಡಾ



ಬಂಧಿಸಲ್ಪಟ್ಟಿದ್ದುವು. ಕೈಯಲ್ಲಿ ದೊಡ್ಡ ಶೂಲವನ್ನು ಹಿಡಿದ ಕುದುರೇ ಸವಾರನೊಬ್ಬನು ಪಿಂಗಳನನ್ನು ನೋಡಿದ ಕೂಡಲೇ ಯಾವ ಮಾತೂ ಇಲ್ಲದೆ ಶೂಲವನ್ನು ಪಿಂಗಳನ ಗುಂಡಿಗೆಗೆ ಗುರಿ ಹಿಡಿದು ಎತ್ತಿದನು.

ಪಿಂಗಳನು ನಿರ್ಭಯದಿಂದ ಗುಂಡಿಗೆಯ ಮೇಲಿದ್ದ ಅಂಗಿಯನ್ನು ತೆರೆದು ತೋರಿಸುತ್ತ, "ನಾನು ಯಾರೆಂದು ಗೊತ್ತಿದೆಯೇ ? ಜಾಲಗಾರ ಪಿಂಗಳ !" ಎನ್ನುತ್ತ ಮುಂದೆ ನಡೆದನು. ಮರು ಕ್ಷಣದಲ್ಲಿ ಕುದುರೆಯೊಂದಿಗೆ ಸವಾರನೂ ಸಹ ಕುಪ್ಪೆ ಜಾರಿ ಬಿದ್ದ ಹಾಗೆ ನೆಲದಲ್ಲಿ ಬಿದ್ದನು, ಪಿಂಗಳನು ಇಮ್ಮಡಿ ಉತ್ಸಾಹದಿಂದ ಎರಡನೇ ದ್ವಾರವನ್ನು ತೆರೆದು ದಾಟಿ ಮೂರನೇ ದ್ವಾರವನ್ನು ಸಮೀಪಿಸಿದನು.

ಈ ಮೂರನೇ ದ್ವಾರದ ಮುಂದೆ ಕಟ್ಟಾಳುವಾದ ಬಿಲ್ಲುಗಾರನೊಬ್ಬನು ಬಿಲ್ಲಿಗೆ ಬಾಣ ಹೂಡಿ ಸಿದ್ಧನಾಗಿ ಪಿಂಗಳನನ್ನೇ ನೋಡಿಕೊಂಡಿದ್ದನು. ಪಿಂಗಳನು ರವಷ್ಟೂ ಶಂಕಿಸದೆ ಮುಂದೆ ನಡೆಯುತ್ತ, ಬಿಲ್ಲು ಗಾರನಿಗೆ ತನ್ನ ಹಣೆಯ ನಡುಭಾಗವನ್ನು ಬೆರಳಿನಿಂದ ಮುಟ್ಟಿ ತೋರಿಸಿದನು. ಉತ್ತರ ಕ್ಷಣದಲ್ಲಿ ಆ ಬಿಲ್ಲುಗಾರನು ಕೆಟ್ಟದನಿಯಿಂದ ಅರಚುತ್ತಾ ಮಾಲಿ ಕೊಂಡು ಬಿದ್ದನು. ಪಿಂಗಳನು ಮುಗುಳು ನಗುತ್ತ, ಮೂರನೆಯ ದ್ವಾರವನ್ನು ದಾಟಿದನು.

ನಾಲ್ಕನೇ ದ್ವಾರವನ್ನು ಪಿಂಗಳನು ಸಮೀಪಿಸು ವಷ್ಟರಲ್ಲಿ ಭೀಕರವಾದ ರಂಕೆಯ ಶಬ್ದ ಕೇಳತೊಡಗಿತು. ದ್ವಾರದ ಎರಡು ಬದಿಗಳಲ್ಲಿ ಎರಡು ಖಡ್ಗಮೃಗಗಳು ತಲೆ ತಗ್ಗಿಸಿ ಪಿಂಗಳನ ಮೇಲೆ ಹಾರಲು ರಂಕೆ ಮೊಳಗಿಸಿ ಭುಸುಗುಡುತ್ತಿದ್ದುವು. ಅದಕ್ಕೂ ಚಲಿಸದೆ ಪಿಂಗಳನು ಮುಂದುವರಿದು ಆ ಖಡ್ಗಮೃಗಗಳನ್ನು ತನ್ನ ಎರಡು ಕೈಗಳಿಂದಲೂ ಮುಟ್ಟಿದನು. ಕೂಡಲೇ ಅವೆರಡೂ ಭಗಭಗನೆ ಉರಿಯುತ್ತ ಬೂದಿಯ ರಾಶಿಯಾಗಿ ಬಿದ್ದುವು. ಪಿಂಗಳನು ಹಿಂದೆ ಹಾರಿ ಆ ಬೆಂಕಿಯ ಜ್ವಾಲೆಯಿಂದ ತಪ್ಪಿಸಿ ಕೊಂಡನು. ಪಿಂಗಳನು ಐದನೆಯ ದ್ವಾರವನ್ನು ಸಮೀಪಿಸುವಷ್ಟರಲ್ಲಿ, ಅವನ ಮುಂದೆ ಕಾಣಿಸಿದ ವಿಚಿತ್ರ ಮೃಗವು ಭಯಕ್ಕಿಂತ ಹೆಚ್ಚು ಆಶ್ಚರ್ಯವನ್ನೇ ಉಂಟುಮಾಡಿತು. ಅದರ ಶರೀರವೂ ಹಿಂದಿನ ಕಾಲುಗಳೂ ಸಿಂಹದ ಆಕೃತಿಯಲ್ಲಿದ್ದುವು. ತಲೆಯೂ ಮುಂದಿನ ಕಾಲುಗಳೂ ಹದ್ದಿನ ಹಾಗಿದ್ದುವು. "ಇದೆಂತಹ ಮೃಗವಪ್ಪ ! ಅಥವಾ ಪಕ್ಷಿ ಜಾತಿಯೋ ಏನೋ ? " ಎಂದು ಪಿಂಗಳನು ಅಂದುಕೊಳ್ಳು ತ್ತಿರಲು, ಆ ಗರುಡ ಸಿಂಹವು ಹಿಂಗಾಲುಗಳ ಮೇಲೆ ಎದ್ದು ರೆಕ್ಕೆಗಳನ್ನು ಗಲಗಲನೆ ಆಡಿಸುತ್ತ ಪಿಂಗಳನ ಮೇಲೆ ಧುಮುಕಿತು.

ಪಿಂಗಳನು ಕಣ್ಣು ಮುಚ್ಚಿ ಮೊಂಡುಹಟದಿಂದ "ದಾರಿ ಬಿಡು ! ನಾನು ಈ ದೇವಾಲಯದ ಹಕ್ಕು ದಾರನಾದ ಜಾಲರಿ ಪಿಂಗಳ !" ಎಂದು ಹೇಳುತ್ತ ಮುಂದಕ್ಕೆ ನಡೆದನು.





ಆಗ ಗರುಡಸಿಂಹವು ಸಿಡಿಮದ್ದು ಸಿಡಿದಂತೆ ಶಬ್ದ ಮಾಡಿ, ಸಿಡಿದು ಹಾರಿ ಚೂರುಚೂರಾಗಿ ಹೋಯಿತು. ಪಿಂಗಳನು ಒಂದು ಸಾರಿ ಅದರ ಕಡೆಗೆ ಕನಿಕರದಿಂದ ನೋಡಿ, ಐದನೆಯ ದ್ವಾರವನ್ನು ದಾಟಿ ಆರನೆಯ ದ್ವಾರದ ಬಳಿಗೆ ಹೋದನು.

ಈ ಆರನೆಯ ದ್ವಾರವನ್ನು ದಾಟಿಬಿಟ್ಟರೆ ತಾನು ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸಿ ಬಿಡುವೆ ನೆಂಬ ಸಂಗತಿ ಅವನ ನೆನಪಿಗೆ ಬಂತು. ಪಿಂಗಳನಿಗಾದ ಆನಂದವನ್ನು ಹೇಳತೀರದು.

ಇದುವೇ ಕೊನೆಯ ದ್ವಾರ. ಇಲ್ಲಿಯ ಭಯಂಕರ ಗಳನ್ನು ಮುಗಿಸಿದರೆ ತೀರಿತು. ಕೆಲಸ ಮುಗಿಯುತ್ತದೆ. ಇನ್ನು ಒಳಭಾಗದಲ್ಲಿರುವ ಉಂಗುರ, ವಜ್ರದ ಹಿಡಿಯ ಕತ್ತಿ, ಭೂಗೋಳ, ಈ ಮೂರು ಅಮೂಲ್ಯ ವಸ್ತು ಗಳೂ ತನ್ನ ಕೈಗೆ ಸಿಗುತ್ತವೆ. ಸಿಗಲೇಬೇಕು.

ಪಿಂಗಳನು ಅಪರಿಮಿತ ಉತ್ಸಾಹದಿಂದ ಆರನೇ ದ್ವಾರವನ್ನು ಮುಟ್ಟಿದನು, ಅಕಸ್ಮಾತ್ತಾಗಿ ಅವನ ಕಣ್ಣುಗಳು ಭ್ರಮಿಸಿದುವು. ಆ ದ್ವಾರದ ಬದಿಯಲ್ಲಿ ಅವನ ಗುರು ಪದ್ಮಪಾದನು ಗದೆಯನ್ನು ಹಿಡಿದು ಕೊಂಡು ನಿಂತಿದ್ದಾನೆ! ಪಿಂಗಳನು ಅರೆ ಮೂರ್ಛೆ ಕವಿದವನಂತೆ ಅಡಿಗಳನ್ನು ಮುಂದಿಡುವಾಗ, "ನಿಲ್ಲು! ನಿಲ್ಲು! ಯಾರು ನೀನು?" ಎಂದು ಭೀಕರಸ್ವರದಿಂದ ಪ್ರಶ್ನೆ ಹೊರಟಿತು.

"ಇವನು ಪದ್ಮಪಾದನಲ್ಲ. ನನ್ನನ್ನು ಮೋಸ ಪಡಿಸಲು ಯಾವುದೋ ಪಿಶಾಚಿ ಪದ್ಮಪಾದನ ಆಕೃತಿ ತಾಳಿದೆ! ಇವನು ಕಳ್ಳ! ನಿಜವಾದ ಪದ್ಮಪಾದನು ಅಲ್ಲವೇ ಅಲ್ಲ!" ಎಂದುಕೊಂಡು ಪಿಂಗಳನು ಅಂದು ಕೊಳ್ಳುತ್ತಿರಲು, ಧಗಧಗನೆ ಹೊಳೆಯುವ ಗದೆ ಅವನ ಕಣ್ಣುಗಳ ಮುಂದೆ ತಿರುಗಿತು. ಪಿಂಗಳನು ಭಯ ಕಂಪಿತನಾಗಿ ಹಿಂದಡಿ ತೆಗೆದಿಟ್ಟನು.

"ಕಳ್ಳನಿವನು! ಸುಳ್ಳನಿವನು! ಜಾಲಗಾರ ಪಿಂಗಳ ಇವನಲ್ಲ! ದೂಡಿರಿ ಹೊರಗೆ! ದೂರ ಬಿಸುಟುಬಿಡಿ!" ಎಂಬ ಕೂಗುಗಳು ಪಿಂಗಳನ ಕಿವಿಗೆ ಬಿದ್ದುವು.

ಮರುಕ್ಷಣದಲ್ಲೇ ಅವನ ಬೆನ್ನು ತಲೆಗಳ ಮೇಲೆ ಕೋಲಿನಿಂದ ಯಾರೋ ಹೊಡೆಯ ತೊಡಗಿದರು. ಅವನ ಕಾಲಿಗೆ ನೆಲ ತಪ್ಪಿತು. ಒಂದೊಂದೇ ದ್ವಾರವು ಧಡಧಡನೆ ಮುಚ್ಚುತ್ತಾ ಬಂದಿತು. ಏನಿದು? ಯಾಕೆ ಹೀಗೆ? ಯಾವ ಶಕ್ತಿಯೋ ತನ್ನನ್ನು ಮೇಲೆ ಹಾರಿಸಿ ಬಿಟ್ಟಿದೆ ಎಂದು ಅವನಿಗೆ ತಿಳಿಯಿತು.

ಪಿಂಗಳನು ಭೀತಿಯಿಂದ ನಡುಗುತ್ತ ಆಕಾಶದಲ್ಲಿ ಹಾರಿ ಹೋಗುತ್ತಿದ್ದನು. ಅವನ ದೃಷ್ಟಿ ಕೆಳಕ್ಕಿಳಿಯಿತು. ಅಲ್ಲಿ ಪದ್ಮಪಾದನು ಕೈಗಳನ್ನು ಚಾಚಿ, ಅವನು ಕೆಳಕ್ಕೆ ಬೀಳದಂತೆ ಹಿಡಿಯಲು ಸಿದ್ಧನಾಗಿ ನಿಂತಿದ್ದನು.

—(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



P. Sundaram

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ನವೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅಣ್ಣನ ಪೂಜೆಯ ಪ್ರಸಾದವನ್ನು,

ಎರಡನೇ ಫೋಟೋ : ತಮ್ಮನಿಗೊಯ್ಯಲು ಕಾದಿದೆ ನವಿಲು

ಕಳುಹಿಸಿದವರು : ಪಿ. ಗಿರಿಧರ, ಚಂಪಕವನ, ದಕ್ಷಿಣ ಕನ್ನಡ.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

---

### ನಿಮಗೆ ಗೊತ್ತೇ ? ಉತ್ತರಗಳು :

೧. ಗ್ರೀಕರು; ಅಲೆಗ್ಸಾಂಡರ್ ದಂಡೆಯಾತ್ರೆ ಮಾಡಿದ ಕ್ರಿ. ಪೂ. ೩೨೭ನೇ ಸಂವತ್ಸರದಲ್ಲಿ ಬಂದರು. ೨. ನಿಕೊಲೋಕಾಂಟಿ; ೧೪೨೦ನೇ ಸಂವತ್ಸರದಲ್ಲಿ ಅವನು ವಿಜಯನಗರವನ್ನು ದರ್ಶನ ಮಾಡಿದನು. ೩. ಅಥನೇಸಿಯಸ್ ನಿಕ್ಟಿನ್; ೧೪೭೦ನೇ ಸಂವತ್ಸರದಲ್ಲಿ. ೪. ಡೊಮಿಂಗೋಸ್ ಪೇಸ್; ೧೫೨೦ನೇ ಸಂವತ್ಸರದಲ್ಲಿ. ೫. ರಾಜಸ್ಥಾನದ ಜಯಪೂರ್ ಪ್ರಾಂತ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.